# ಮುದಿಮಲ್ಲಪ್ಪನವರ ಜೀವನ ಹಾಗೂ ಸಾಧನೆ

ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ


ಸಂಶೋಧಕರು

ಕೃಷ್ಣಮೂರ್ತಿ ಪಿ.

ಮಾರ್ಗದರ್ಶಕರು

ಡಾ. ಹೆಬ್ಬಾಲೆ ಕೆ. ನಾಗೇಶ್







ಸಮಾಜ ವಿಜ್ಞಾನಗಳ ನಿಕಾಯ

ಜಾನಪದ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

# ಮುದಿಮಲ್ಲಪ್ಪನವರ ಜೀವನ ಹಾಗೂ ಸಾಧನೆ

ಎಂ.ಫಿಲ್ ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

**ಕೃಷ್ಣಮೂರ್ತಿ ಪಿ.**

ಮಾರ್ಗದರ್ಶಕರು

**ಡಾ. ಹೆಬ್ಬಾಲೆ ಕೆ.ನಾಗೇಶ್**

ಅಧ್ಯಾಪಕರು

ಜಾನಪದ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬





ಸಮಾಜ ವಿಜ್ಞಾನಗಳ ನಿಕಾಯ

**ಜಾನಪದ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

72A



ದಿವಂಗತ ಶ್ರೀ ಮುದಿಮಲ್ಲಪ್ಪನವರು

ನಿಧನ : ೨೨.೦೭.೨೦೦೨

# ದೃಢೀಕರಣ ಪತ್ರ

ಶ್ರೀ ಕೃಷ್ಣಮೂರ್ತಿ ಪಿ. ಇವರು **'ಮುದಿಮಲ್ಲಪ್ಪನವರ ಜೀವನ ಹಾಗೂ ಸಾಧನೆ'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಜಾನಪದ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೦ ಏಪ್ರಿಲ್ ೨೦೦೩

ಸ್ಥಳ : ವಿದ್ಯಾರಣ್ಯ

**(ಡಾ. ಹೆಬ್ಬಾಲೆ.ಕೆ.ನಾಗೇಶ್)**

ಮಾರ್ಗದರ್ಶಕರು
ಅಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಪ್ರಮಾಣ ಪತ್ರ

'ಮುದಿಮಲ್ಲಪ್ಪನವರ ಜೀವನ ಹಾಗೂ ಸಾಧನೆ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ಹೆಬ್ಬಾಲೆ ಕೆ.ನಾಗೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಜಾನಪದ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೩೦ ಏಪ್ರಿಲ್ ೨೦೦೩
ಸ್ಥಳ : ವಿದ್ಯಾರಣ್ಯ

ಪಿ. ಕೃಷ್ಣಮೂರ್ತಿ

**(ಕೃಷ್ಣಮೂರ್ತಿ ಪಿ)**

ಸಂಶೋಧಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ನೆನಕೆ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡ ಹಾಗೂ ಕುಲಸಚಿವರಾದ ಡಾ.ಕೆ.ವಿ.ನಾರಾಯಣ, ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರಿಗೆ,

ಎಂ.ಫಿಲ್.ಮಾರ್ಗದರ್ಶನ ಮಾಡಿದ ಪ್ರೀತಿಯ ಗುರುಗಳಾದ ಡಾ.ಹೆಬ್ಬಾಲೆ ಕೆ.ನಾಗೇಶ್ ಅವರಿಗೆ, ಜಾನಪದ ವಿಭಾಗದ ಮುಖ್ಯಸ್ಥರಾದ ಡಾ.ಮಂಜುನಾಥ ಬೇವಿನಕಟ್ಟಿ, ಅಧ್ಯಾಪಕರಾದ ಡಾ.ಹರಿಶ್ಚಂದ್ರ ದಿಗ್ಸಂಗಿಕರ್, ಡಾ.ಮೊಗಳ್ಳಿ ಗಣೇಶ್, ಡಾ.ಸ.ಚಿ.ರಮೇಶ್, ಡಾ.ಸಿ.ಟಿ.ಗುರುಪ್ರಸಾದ ಅವರಿಗೆ, ಹಾಗೂ ವಿಭಾಗದ ವೀರೇಶ, ಹನುಮಂತಪ್ಪ ಅವರಿಗೆ,

ಪೂಜ್ಯ ಗುರುಗಳಾದ ಡಾ.ಬಿ.ಜಿ.ಕನಕೇಶಮೂರ್ತಿ, ಹಿರಿಯ ಸಾಹಿತಿಗಳಾದ ಶ್ರೀ ಗುರುಮೂರ್ತಿ ಪೆಂಡಕೂರು, ಶ್ರೀಮತಿ ಸುಜಾತ ಅಕ್ಕಿ ಅವರಿಗೆ,

ಅಧ್ಯಯನದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ನಿಧನರಾದ ಪೂಜ್ಯ ನನ್ನ ಅಜ್ಜಿಯವರಾದ ಶ್ರೀಮತಿ ಪೋತ್ಲುಗ್ಳಿ ಹನುಮಂತಮ್ಮ ಅವರಿಗೆ,

ಅಧ್ಯಯನಕ್ಕೆ ಪ್ರೋತ್ಸಾಹ ಕೊಟ್ಟ ಪೂಜ್ಯ ತಂದೆಯವರಾದ ಶ್ರೀ ಪಿ.ಸೋಮಪ್ಪ, ತಾಯಿ ಜಯಮ್ಮ, ಅಣ್ಣಂದಿರಾದ ಕೊಟ್ರೇಶ್, ಶಿವರಾಜ ಅವರಿಗೆ,

ಸಂಶೋಧನೆಯ ಸಂದರ್ಭದಲ್ಲಿ ಚರ್ಚೆಗಿಳಿದು ವಿಷಯದಲ್ಲಿ ಸಹಕರಿಸಿ ಸದಾ ಓದುಗನನ್ನಾಗಿ ಮಾಡಿದ ಪ್ರೀತಿಯ ಮಾವಂದಿರಾದ ಶ್ರೀ ಬ್ಯಾಟಿ ರಾಮಪ್ಪ ಶಿಕ್ಷಕರು, ಪ್ರೀತಿಯ ಅಕ್ಕ ಶ್ರೀಮತಿ ಲೀಲಾವತಿ ರಾಮಪ್ಪ ಅವರಿಗೆ,

ಓದಿನ ಯಶಸ್ಸನ್ನು ಬಯಸಿದ ಸಮಸ್ತ ಪೋತ್ಲುಗ್ಳಿ ಬಂಧುಗಳಿಗೆ,

ಸಂದರ್ಶನ ವೇಳೆಯಲ್ಲಿ ಸಹಕರಿಸಿದ 'ಸೊನ್ನ' ಗ್ರಾಮದ ದಿ|| ಶ್ರೀ ಮುದಿಮಲ್ಲಪ್ಪನವರ ಹೆಂಡತಿ ಶ್ರೀಮತಿ ಹೊನ್ನಮ್ಮ, ಶ್ರೀಯುತರ ಒಡನಾಡಿಗಳಾದ ಗುಡ್ಡಪ್ಪ, ವಡಚನಾಳು ತಿಂದಪ್ಪ, ಹಿರಿಯ ಸಾಹಿತಿ ಗುರುಮೂರ್ತಿ ಪೆಂಡಕೂರು, ಶಿವರಾಮಪ್ಪ, ಹನುಮಂತಪ್ಪ, ವಿರೂಪಾಕ್ಷಿ, ಎಚ್.ಎಂ.ವೀರಭದ್ರಯ್ಯ, ದೊಡ್ಡನಿಂಗಪ್ಪ ಅವರಿಗೆ,

ಅಧ್ಯಯನದ ಉದ್ದಕ್ಕೂ ನನ್ನ ಜೊತೆಗೂಡಿ ಸಹಕರಿಸಿ ಹಾಗೂ ಅಂದವಾಗಿ ಫೋಟೊಗಳನ್ನು ಮುದ್ರಿಸಿಕೊಟ್ಟ ಆತ್ಮೀಯ ಸ್ನೇಹಿತ ಟಿ.ಹನುಮಂತಪ್ಪ ಅವರಿಗೆ,

ಸಂಶೋಧನೆಗೆ ಪ್ರೋತ್ಸಾಹಿಸಿದ ಎ.ಟಿ.ಮಂಜು, ಅಂಜಿನಪ್ಪ, ರವೀಂದ್ರ, ಆಂಜನೇಯ, ಗೌರಿಶಂಕರ, ಪ್ರಕಾಶ್, ನೇತ್ರ, ವಿಜಿ, ಟಿ.ವೆಂಕಟೇಶ, ಗುರುಬಸವರಾಜ, ಮಂಜು, ಚಿದ, ಗಂಗಾಧರ, ಜಮೀರ್, ಷಣ್ಮುಖ, ದಿ|| ಪ್ರದೀಪ್, ಬಸವರಾಜ, ಕಾಸಿಂ, ಹುಲುಗ, ಗಿರೀಶ್, ವಿಷ್ಣು, ನನ್ನ ಎಲ್ಲಾ ಮಿತ್ರರಿಗೂ,

ಸಂಶೋಧನೆಗೆ ಪೂರಕವಾಗಿ ಪುಸ್ತಕಗಳನ್ನು ಒದಗಿಸಿದ ಗ್ರಂಥಾಲಯದ ಸಿಬ್ಬಂದಿಯವರಿಗೆ ಹಾಗೂ ಸಕಾಲಕ್ಕೆ ಅಂದವಾಗಿ ಡಿ.ಟಿ.ಪಿ.ಮಾಡಿಕೊಟ್ಟ ಸೋಮನಾಥ ಕುಡುತಿನಿ ಅವರಿಗೆ,

ಕೃತಜ್ಞತೆಗಳು

ಕೃಷ್ಣಮೂರ್ತಿ ಪಿ.

# ಪರಿವಿಡಿ


೧. **ಅಧ್ಯಯನದ ಉದ್ದೇಶ ಮತ್ತು ಮಹತ್ವ** / ೧ - ೫

೨. **ಮುದಿಮಲ್ಲಪ್ಪನವರ ಜೀವನ ಚರಿತ್ರೆ** / ೬ - ೧೭

೨.೧ ಭೌಗೋಳಿಕ ಪರಿಸರ

೨.೨ ಜನನ ಹಾಗೂ ಬಾಲ್ಯ ಜೀವನ

೨.೩ ಕೌಟುಂಬಿಕ ಜೀವನ

೨.೪ ಸಾಮಾಜಿಕ ಜೀವನ

೨.೫ ಆರ್ಥಿಕ ಜೀವನ

೨.೬ ಮುದಿಮಲ್ಲಪ್ಪನವರ ಕೊನೆ ದಿನಗಳು

೩. **ಡೊಳ್ಳು ಕುಣಿತದ ಪರಂಪರೆ** / ೧೮ - ೨೫

೩.೧ ಡೊಳ್ಳಿನ ಪದನಿಷ್ಪತ್ತಿ

೩.೨ ಡೊಳ್ಳಿನ ಹುಟ್ಟು ಹಾಗೂ ಬೆಳವಣಿಗೆ

೩.೩ ಡೊಳ್ಳಿನ ರಚನೆ

೩.೪ ಡೊಳ್ಳಿನ ವೈಲಕ್ಷಣಗಳು

೪. **ಮುದಿಮಲ್ಲಪ್ಪನವರ ವ್ಯಕ್ತಿತ್ವ ಮತ್ತು ಕಾರ್ಯಸಾಧನೆ** / ೨೬ - ೩೮

೪.೧ ಡೊಳ್ಳು ಕುಣಿತಗಳ ಕಾರ್ಯಕ್ರಮಗಳು

೪.೨ ಹಲವಾರು ತಂಡಗಳಿಗೆ ಡೊಳ್ಳಿನ ತರಬೇತಿ

೪.೩ ಹಲವು ಪ್ರಶಸ್ತಿಗಳು

೪.೪ ಡೊಳ್ಳಿನೊಂದಿಗೆ ಹಳ್ಳಿಯಿಂದ ಡೆಲ್ಲಿಗೆ

೫. **ಡೊಳ್ಳಿನ ಹಾಡುಗಳು ಮತ್ತು ಡೊಳ್ಳಿನ ಮಜಲುಗಳು** / ೩೯ - ೭೪

೫.೧ ಬಾಳಿ ಬದುಕಿರೆಂದು ಹರಸವ್ವ, ಬೀರೆ ದೇವರು, ಮಳೆರಾಯ, ಭರಮಣ್ಣ, ಕಾಮವ್ವ-ಸೂರವ್ವ, ದೇವಿಹಾಡು ಇತ್ಯಾದಿಗಳು

೫.೨ ಒಂಟಿಗುಣಿ, ಎರಡುಗುಣಿ, ಮೂರುಗುಣಿ, ಹರಿವಾಲಗ, ಕಾಲಮಂಡಿ ಬಡಿತ, ಮರಗಾಲು ಬಡಿತ, ಲಾಗ ಹಾಕುವುದು ಇತ್ಯಾದಿಗಳು

೬. **ಸಮಕಾಲೀನತೆ ಮತ್ತು ಡೊಳ್ಳಿನ ಸ್ಥಿತ್ಯಂತರ** / ೭೫ - ೮೦

೭. **ಸಮಾರೋಪ** / ೮೧ - ೮೪

**ಅನುಬಂಧ** / ೮೫ - ೧೦೩

೧. ಸುತ್ತೋಲೆಗಳು

೨. ವಕ್ತೃ ವಿವರ

೩. ಗ್ರಂಥಋಣ

೪. ಛಾಯಾಚಿತ್ರಗಳ ವಿವರ



# ಅಧ್ಯಯನದ ಉದ್ದೇಶ ಮತ್ತು ಮಹತ್ವ

ಆದಿಮಾನವನು ನೈಸರ್ಗಿಕವಾಗಿ ಪ್ರಕೃತಿಯ ಮಡಿಲಲ್ಲಿ ಪ್ರಾಣಿಪಕ್ಷಿಗಳ ನಡುವೆ ಜೀವಿಸಿದನು. ಬರುಬರುತ್ತಾ ಪ್ರಾಣಿ ಪಕ್ಷಿಗಳ ಕೂಗನ್ನು ಆಲಿಸಿ, ಅದಕ್ಕೆ ತಲೆದೂಗಿ, ಸಿಕ್ಕಾಪಟ್ಟೆ ಕುಣಿದು ಆನಂದಾತಿರೇಕವನ್ನು ಅನುಭವಿಸಿದನು. ಸಾಧ್ಯವಾದಷ್ಟು ಬದುಕನ್ನು ಆನಂದೋತ್ಸಾಹಗಳಿಗೆ ಒಗ್ಗಿಸಿಕೊಂಡು ಹಗುರ ಮಾಡಿಕೊಳ್ಳಲು ಯತ್ನಿಸುತ್ತಾನೆ. ಇದಕ್ಕೆ ಅನೇಕ ಮಾಧ್ಯಮಗಳನ್ನು ಹುಡುಕಿಕೊಳ್ಳುತ್ತಾನೆ. ಇವುಗಳಲ್ಲಿ ಕುಣಿತವೂ ಒಂದು. ಕುಣಿತಕ್ಕೆ ಕಾರಣಗಳು ಎರಡು : ಮೊದಲನೆಯದಾಗಿ ಕುಣಿತವು ಸಂತೋಷಾತಿರೇಕಗಳ ಅಭಿವ್ಯಕ್ತಿ. ಎರಡನೆಯದಾಗಿ ಇದು ಅನುಕರಣೆಯಾಗಿ ಬಂದಿರಲೂಬೇಕು. ಮಳೆಯಾದುದಕ್ಕೆ, ಬೇಟೆ ಸಿಕ್ಕಿದ್ದಕ್ಕೆ ಕುಣಿದಾಡಿದ ಮನುಷ್ಯ ಗರಿಗೆದರಿ ಕುಣಿಯುವ ನವಿಲು, ಓಡುವ ಜಿಂಕೆ ಇಂಥವುಗಳನ್ನು ಅನುಕರಿಸಿಯೂ ಕುಣಿತವನ್ನು ರೂಢಿಸಿಕೊಂಡ ಮನುಷ್ಯ ಅನಾದಿಕಾಲದಿಂದ ಅನೇಕ ಜನಪದ ಕಲೆಗಳನ್ನು ರೂಢಿಸಿಕೊಂಡು ಬಂದಿದ್ದಾನೆ. ಇವುಗಳಲ್ಲೆಲ್ಲಾ ಕುಣಿತವೇ ಅತ್ಯಂತ ಪ್ರಾಚೀನವಾದುದ್ದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಮೊದಮೊದಲು ಸಂತೋಷವಾದಗಲೆಲ್ಲ ಮಕ್ಕಳಂತೆ ಕುಣಿಯುತ್ತಿದ್ದ ಮನುಷ್ಯ, ಕ್ರಮೇಣ ಈ ಕುಣಿತವನ್ನು ತಾಳ-ಲಯಗಳಿಗೆ ಹೊಂದಿಸಿಕೊಂಡು ಕಲೆಯನ್ನಾಗಿಸಿದ. ಕುಣಿತ ಒಮ್ಮೆ ಕಲೆಯಾದ ಮೇಲೆ ಇದರ ಅಭಿವ್ಯಕ್ತಿಗೆ ನಿಶ್ಚಿತ ಕಾಲ-ಸ್ಥಳಗಳು ಗೊತ್ತಾದವು. ಇಂದಿನ ಎಲ್ಲಾ ಬಗೆಯ ಶಾಸ್ತ್ರೀಯ ನೃತ್ಯಗಳಿಗೆ ಜನಪದ ಕುಣಿತಗಳೇ ಮೂಲವಾಗಿವೆ.

ಜಾನಪದ ಅಧ್ಯಯನವು ನಮ್ಮ ದೇಶಕ್ಕೆ ಒಂದು ಶತಮಾನದಷ್ಟು ಹಳೆದು. ಈ ಅಧ್ಯಯನದ ಸುಳಿವು ಪಾಶ್ಚತ್ಯ ವಿದ್ವಾಂಸರಿಂದ ಕಾಣಿಸಿಕೊಂಡಿತು. ಕರ್ನಾಟಕದಲ್ಲಿ ಜಾನಪದ ಸಂಶೋಧನೆಗಳು ಸಾಕಷ್ಟು ನಡೆದಿವೆ ಹಾಗೂ ನಡೆಯುತ್ತಲಿವೆ. ಜಾನಪದವು ಅಮೂರ್ತವಾಗಿ ನಿತ್ಯವೂ ಹುಟ್ಟುತ್ತದೆ. ಹಾಗೂ ರೂಪಾಂತರದಲ್ಲಿ ವಿಕಾಸಗೊಳ್ಳುವ ಪ್ರವೃತ್ತಿಯನ್ನು ಹೊಂದಿರುವಂತದ್ದು. ಹೀಗೆ ಜಾನಪದ ಅಧ್ಯಯನವು ಜನಪದಗೀತೆ, ಗಾದೆ, ಒಗಟು, ಸಂಪ್ರದಾಯ, ಆಚರಣೆ, ಊಟೋಪಚಾರ, ಉಡುಗೆ, ತೊಡುಗೆ ಇತ್ಯಾದಿ ಮಜಲುಗಳಲ್ಲಿ ಅಧ್ಯಯನ ನಡೆದಿರುವುದನ್ನು ಕಾಣುತ್ತೇವೆ ಹಾಗೂ ಜನಪದ ಕಲಾವಿದರ ಬಗ್ಗೆ ಅಧ್ಯಯನ ನಡೆಸುವುದು ಬಹು ಸೂಕ್ತವಾಗಿದೆ. ಜಾನಪದದಲ್ಲಿ ಇನ್ನು ಅನೇಕ ವಿಷಯಗಳ ಬಗ್ಗೆ ಅಧ್ಯಯನ ಮಾಡಬಹುದಾದ ಬಹುದೊಡ್ಡ ಕ್ಷೇತ್ರವಾಗಿದೆ. ಪಾಶ್ಚಾತ್ಯ ವಿದ್ವಾಂಸರು ಹೇಳುವ ಹಾಗೆ "ಭಾರತವು ಜನಪದದ ತವರು" ಎಂಬುದನ್ನು ಅರಿತು ಜಾನಪದದ ಅಂಶಗಳನ್ನು ಉಳಿಸಿ - ಬೆಳೆಸುವಂತಹ ಕೆಲಸವಾಗಬೇಕಾಗಿದೆ. ಜಾನಪದವು ಎಲ್ಲಾ ಕ್ಷೇತ್ರಗಳಲ್ಲಿ ವ್ಯಾಪಿಸಿ ತನ್ನದೇ ಆದ ವಿಶಿಷ್ಠತೆಯನ್ನು ಪಡೆದುಕೊಂಡಿದೆ.

ಜನಪದ ಕಲೆಗಳಲ್ಲೇ ಅತಿಮುಖ್ಯವಾದ ಕಲೆ 'ಡೊಳ್ಳುಕುಣಿತ' ಅನೇಕ ವರ್ಷಗಳಿಂದಲೇ ಧಾರ್ಮಿಕವಾಗಿ ಹಾಗೂ ಸಂಪ್ರದಾಯಿಕವಾಗಿ, ಹಬ್ಬ - ಹುಣ್ಣಿಮೆ, ಜಾತ್ರೆ - ಉತ್ಸವ, ಸಭೆ - ಸಮಾರಂಭಗಳಲ್ಲಿ ಪ್ರದರ್ಶನಗೊಂಡು ಈ ಕಲೆ ಭಾರತೀಯ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದೆ. ಪುರಾಣೇತಿಹಾಸಗಳಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದಿದೆ. ಇಂತಹ ಕಲೆಯನ್ನು ಕರಗತ ಮಾಡಿಕೊಂಡವರು ಬಳ್ಳಾರಿ (ಜಿ) ಹಗರಿಬೊಮ್ಮನಹಳ್ಳಿ (ತಾ) 'ಸೊನ್ನ'ದ ಗ್ರಾಮದವರಾದ ಶ್ರೀ ಹಮ್ಮಿಗಿ ಮುದಿಮಲ್ಲಪ್ಪನವರು ಡೊಳ್ಳುಕುಣಿತದ ಕಲೆಯಲ್ಲಿ ಪ್ರಸಿದ್ಧಗೊಂಡಿದ್ದಾರೆ. ಹಾಗೂ ಈ ಕಲೆಯನ್ನು ದೇಶ - ವಿದೇಶಗಳಲ್ಲಿ ಪ್ರದರ್ಶಿಸಿ, ಬೆಳೆಸಿದ ಕೀರ್ತಿ ಶ್ರೀಯುತರಿಗೆ ಸಲ್ಲುತ್ತದೆ. ಇವರು ಡೊಳ್ಳಿನ ಕಲೆಗೆ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಕರ್ನಾಟಕ ರಾಜ್ಯ ಸರ್ಕಾರವು ೨೦೦೧ನೇ ಸಾಲಿನ "ಜಾನಪದ ಶ್ರೀ ಪ್ರಶಸ್ತಿ"ಯನ್ನು ನೀಡಿ ಗೌರವಿಸಿದೆ. ಇದು ಸತತ ೮೦ ವರ್ಷಗಳವರಗೆ ಡೊಳ್ಳಿನ ಕಲೆಯಲ್ಲಿ ಮುದಿಮಲ್ಲಪ್ಪನವರ ಅವಿರತ ಸೇವೆಗಾಗಿ ಸಂದ ಪುರಸ್ಕಾರವಾಗಿದೆ. ಪ್ರಸ್ತುತ ಕಾಲದಲ್ಲಿ ಇಂತಹ ಕಲಾವಿದರ ಜೀವನ ಹಾಗೂ ಸಾಧನೆಯ ಬಗ್ಗೆ ಅಧ್ಯಯನ ಕೈಗೊಂಡಿರುವೆನು.

ಪ್ರಸ್ತುತ ದಿನಗಳಲ್ಲಿ ಇಂತಹ ಕಲೆ ಹಾಗೂ ಕಲಾವಿದರು ನಶಿಸಿ ಹೋಗುತ್ತಿದ್ದಾರೆ. ಆದ್ದರಿಂದ ಅಳಿದುಳಿದ ಕಲೆ ಹಾಗೂ ಕಲಾವಿದರ ಬಗ್ಗೆ ಅಧ್ಯಯನಗಳು ನಡೆಯುವುದು ಸೂಕ್ತವಾಗಿದೆ. ದಿನಗಳು ಉರುಳಿದಂತೆ ನಮ್ಮಲ್ಲಿರುವ ಎಷ್ಟೋ ನಂಬಿಕೆ, ಸಂಪ್ರದಾಯ, ಆಚರಣೆಗಳು ಆಧುನಿಕತೆ ಮತ್ತು ಜಾಗತಿಕರಣದಿಂದ ಧಾರ್ಮಿಕ ಆಚರಣೆಗಳಲ್ಲಿ ಪಾಲ್ಗೊಳ್ಳುವ ಇಂತಹ ಅನೇಕ ಕಲೆಗಳು ಅವಸಾನದ ಹಾದಿಯನ್ನೀಡಿದವು. ಆದ್ದರಿಂದ ಗ್ರಾಮ ಜೀವನದ ಉಸಿರಾಗಿರುವ ಜನಪದ ಕಲೆಗಳಿಗೆ ಮತ್ತೆ ಹೊಸ ಪರಿಸರವನ್ನು ಒದಗಿಸುವ ಬೃಹತ್ ಪ್ರಯತ್ನವೊಂದು ನಡೆಯಬೇಕಾಗಿದೆ. ನಮ್ಮ ಎಷ್ಟೋ ಗ್ರಾಮಕಲೆಗಳು ಮತ್ತು ಅವುಗಳ ಬಗ್ಗೆ ಮಾಹಿತಿ ನೀಡಬಲ್ಲ ಕಲಾವಿದರು ಕಣ್ಮರೆಯಾಗಿ ಹೋಗುತ್ತಿದ್ದಾರೆ. ಕೆಲವಂತೂ ಪೂರ್ಣ ಕಣ್ಮರೆಯಾಗೇ ಹೋಗಿವೆ. ಇರುವಷ್ಟು ವಸ್ತುವನ್ನಾದರೂ ಉಳಿಸಿ - ಬೆಳೆಸುವಂತ ಕಾರ್ಯ ಹಮ್ಮಿಕೊಳ್ಳಬೇಕು.

ಉತ್ತರಕರ್ನಾಟಕದಲ್ಲಿ ಪ್ರಚಾರದಲ್ಲಿರುವ ಕುಣಿತವೆಂದರೆ 'ಡೊಳ್ಳುಕುಣಿತ' ಇದು ಸಂಪೂರ್ಣವಾಗಿ

ಧಾರ್ಮಿಕತೆಯ ಪರಿಸರದಲ್ಲಿ ಬೆಳೆದುಬಂದಂತಹದು. ಜಾತ್ರೆ, ಹಬ್ಬ, ಹರಿದಿನಗಳಲ್ಲಿ ತುಂಬಾ ಅವಶ್ಯಕವಾಗಿದೆ. 'ಡೊಳ್ಳುಕುಣಿತದ ಕಲೆ' ಕನ್ನಡ ನಾಡಿನ ಕಲೆಗಳಲ್ಲಿ ವಿಶಿಷ್ಟವಾದದ್ದು. ಇದು ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಡೊಳ್ಳು ಕುರುಬರ ವಿಶೇಷ ವಾದ್ಯ. ಜನಪದ ಕಲೆಗಳಲ್ಲಿ 'ಗಂಡುಕಲೆ' ಎನಿಸಿರುವ ಡೊಳ್ಳುಕುಣಿತ ಪುರುಷರಿಗೆ ಮೀಸಲಾದ ಕಲೆ. ಈ ಕಲೆಯಲ್ಲಿ ಜಾಣತನವಿದೆ; ಆವೇಶ ತುಂಬಿದೆ, ಕಲಾತ್ಮಕವಾಗಿ ಬಾರಿಸುವ ಡೊಳ್ಳಿನ ಗತಿ, ನಾದದಲ್ಲಿ ಇಹಲೋಕವನ್ನೇ ಮರೆಸಿ ದೈವದ ಕಡೆ ಚಿತ್ತವನ್ನು ಹರಿಸುವ ಮೋಡಿ ಇದೆ. ಇಂತಹ ಒಂದು ಕಲೆ ಇಂದು ನಶಿಸಿ ಹೋಗುತ್ತಿದೆ. ಕಾರಣ ಅದನ್ನು ಇತ್ತೀಚಿನ ವರ್ಷಗಳಲ್ಲಿ ಅಷ್ಟಾಗಿ ಮಾನ್ಯಮಾಡದೇ ಹೋಗಿರುವುದು. ಮುಂದಿನ ಹಲವು ವರ್ಷಗಳಲ್ಲಿ ನಾವು ಇದನ್ನು ನೋಡಲು ಸಹ ಸಾಧ್ಯವಾಗದೇ ಇರುವ ವಾತಾವರಣವನ್ನು ನಿರ್ಮಿಸಿಕೊಳ್ಳುತ್ತಿದ್ದೇವೆಂದು ಹೇಳಿದರೆ ಬಹುಶ: ತಪ್ಪಗಲಾರದು. ಹಿಂದಿನ ದಿನಗಳಲ್ಲಿ ಧಾರ್ಮಿಕತೆಯಲ್ಲಿ ವೈಭವಯುತವಾಗಿ ಮೆರೆದಿದ್ದ ಈ ಕಲೆ ಇಂದು ಅವಸಾನದ ಅಂಚಿನಲ್ಲಿದೆ. ಆದಕಾರಣ ಇಂದಿನ ಪೀಳಿಗೆಯವರು ಈ ಕಲೆಯನ್ನು ಅಧ್ಯಯನ ಮಾಡಿ ಜೀವಂತವಾಗಿರಿಸಿದರೆ, ಮುಂದಿನ ಪೀಳಿಗೆಯವರಿಗೆ ಈ ಕಲೆಗಳ ಪರಿಚಯ ಸಿಗುತ್ತದೆ.

ಇಂತಹ ಕಲೆಯನ್ನು ರೂಢಿಸಿಕೊಂಡವರು ಕೆಲವರು ಸಿಗುತ್ತಾರೆ. ಅಂತಹ ಕಲಾವಿದರನ್ನು ಗುರ್ತಿಸಿ ಅವರಿಗೆ ಪ್ರೋತ್ಸಾಹ, ಬೆಂಬಲ ಹಾಗೂ ಆರ್ಥಿಕ ಸಹಾಯವನ್ನು ನೀಡಿದರೆ ಎಷ್ಟೋ ಜನಪದ ಕಲೆಗಳು ಬಡತನದಿಂದ ಸೊರಗಿ ಅಸ್ಥಿಪಂಜರದಂತೆ ಆಗುತ್ತಿರಲಿಲ್ಲ. ಆದ್ದರಿಂದ ಅಳಿದುಳಿದ ಕಲೆಗಳನ್ನು ಅಧ್ಯಯನ ಮಾಡಿ ನಮ್ಮ ಜನಪದ ಸಂಸ್ಕೃತಿಯನ್ನು ಉಳಿಸಿ - ಬೆಳೆಸುವಂತಹ ಕಾರ್ಯವಾಗಬೇಕಾಗಿದೆ.

''ಜನಪದ ಕುಣಿತಗಳು ಧಾರ್ಮಿಕ ಆಚರಣೆಯ ಸಂದರ್ಭಗಳಲ್ಲಿ ವಿಶೇಷವಾಗಿ ಪ್ರದರ್ಶಿಸಲಾಗುತ್ತದೆ. ಇವುಗಳನ್ನು ಸ್ಥೂಲವಾಗಿ ಧಾರ್ಮಿಕ ಆಚರಣೆಯ ಹಿನ್ನೆಲೆಯಲ್ಲಿ ಎರಡು ವಿಭಾಗವಾಗಿ ವಿಭಾಗಿಸಬಹುದು. ಮೊದಲನೆಯದಾಗಿ ಧಾರ್ಮಿಕ ಆಚಣೆಯ ಒಂದಂಗವಾಗಿ ಬರುವ ಕುಣಿತಗಳು, ಎರಡನೆಯದಾಗಿ ಧಾರ್ಮಿಕ ಆಚರಣೆಯ ಸಂದರ್ಭದಲ್ಲಿ ಮನರಂಜನೆಗಾಗಿ ಬರುವ ಕುಣಿತಗಳು. ಪುರವಂತಿಕೆಯ ಕುಣಿತ, ಕರಗದ ಕುಣಿತ, ಡೊಳ್ಳಿನ ಕುಣಿತ, ಧಾರ್ಮಿಕ ಕಾರ್ಯಚರಣೆಯ ಒಂದೊಂದು ಭಾಗವಾಗಿ ಬರುತ್ತವೆ. ಇವಿಲ್ಲದಿದ್ದರೆ ಇಲ್ಲಿಯ ವಿಧಿಕ್ರಿಯೆಗಳು ಪೂರ್ಣಗೊಳ್ಳುವುದೇ ಇಲ್ಲ. ಉದಾಹರಣೆಗೆ ಕೊಡುವುದಾದರೆ ಕುದುರೆ ಕುಣಿತ ಊರಿನ ಉತ್ಸವದ ಒಂದು ಐಚ್ಛಿಕ ಮನರಂಜನೆಯಾಗಿ ಬರುತ್ತದೆ. ಕುದುರೆ ಕುಣಿತ ಇಲ್ಲದಿದ್ದರೆ ಬಯಲಾಟದ ಪ್ರದರ್ಶನವಿಟ್ಟುಕೊಂಡರೆ ನಡೆಯುತ್ತದೆ. ಹೀಗೆ ಕೆಲವು ಕುಣಿತಗಳು ಅನಿವಾರ್ಯವಾಗಿ ಬೆಳೆದುಬಂದರೆ ಇನ್ನು ಕೆಲವು ಕುಣಿತಗಳು ಐಚ್ಛಿಕವಾಗಿ ಬೆಳೆದುಬಂದಿವೆ. ಹೀಗೆ ಧಾರ್ಮಿಕ ಕಾರ್ಯಾಚರಣೆಗಳು ಜನಪದ ಕುಣಿತಕ್ಕೂ ಆಂತರಿಕ ಸಂಬಂಧ ಬೆಳೆದುಬಂದಿದೆ.

ತುಂಬಾ ಸರಳವಾಗಿ ತೋರುವ ಜನಪದ ಕಲೆಗಳನ್ನು ಜಗತ್ತಿನಾದ್ಯಂತ ಎಲ್ಲ ದೇಶಗಳ ಜನ ಎಲ್ಲಾ ಕಾಲಕ್ಕೆ ರೂಢಿಸಿಕೊಂಡು ಬಂದಿದ್ದಾರೆ. ಧಾರ್ಮಿಕ ಉತ್ಸವ, ಹಬ್ಬಗಳಿಗೆ ನೆಲೆವೀಡಾಗಿರುವ ಭಾರತದುದ್ದಕ್ಕೂ ಜನಪದ ಕುಣಿತಗಳು ಕಾಣಿಸಿಕೊಳ್ಳುತ್ತವೆ. ಉತ್ತರದ ಮಣಿಪುರಿ ನೃತ್ಯ, ಆಂಧ್ರಪ್ರದೇಶದ ಕೂಚಿಪುಡಿ ನೃತ್ಯಗಳು ಜಗತ್ಪ್ರಸಿದ್ಧವಾಗಿವೆ. ಒರಿಸ್ಸಾದ 'ಚೌ', ಮಧ್ಯಪ್ರದೇಶದ 'ಗೌರ್', ಪಂಜಾಬಿನ 'ಭಾಂಗ್ರಾ' ಉತ್ತರ ಪ್ರದೇಶದ 'ರಾಸಲೀಲಾ' ಇವೆಲ್ಲೊ ಆಯಾ ಪ್ರದೇಶದವರ ಬತ್ತದ ಜೀವನೋತ್ಸಾಕ್ಕೆ ಸಂಕೇತದಂತಿದೆ. ಉತ್ತರಕನ್ನಡ

ಜಿಲ್ಲೆಯಲ್ಲಿ ಬಹಳ ಪ್ರಸಿದ್ಧ ಪಡೆದುದು ಸಿಂಹದ ಕುಣಿತ, ದಕ್ಷಿಣಕನ್ನಡ ಜಿಲ್ಲೆಯ ಭೂತದ ಕುಣಿತ, ದುಡಿಕುಣಿತಗಳು ಪ್ರಸಿದ್ಧವಾಗಿದೆ. ಉತ್ತರ ಕರ್ನಾಟಕದಲ್ಲೂ ಅನೇಕ ಬಗೆಯ ಕುಣಿತಗಳಿವೆ. ಪುರವಂತಿಕೆ ಕುಣಿತ, ಕುದುರೆಕುಣಿತ, ಹೆಜ್ಜೆಕುಣಿತ, ಡೊಳ್ಳುಕುಣಿತ, ದಟ್ಟಿಕುಣಿತ ಮೊದಲಾದವು ಇಲ್ಲಿ ಪ್ರಸಿದ್ಧವಾಗಿವೆ.೧

"ಕಲೆ, ಮನುಷ್ಯನ ಮನಸ್ಸನ್ನು ಮುದಗೊಳಿಸಿ, ಹದಗೊಳಿಸಿ ಅವನಲ್ಲಿ ಒಂದು ವಿಶಿಷ್ಟ ಬಗೆಯ ಸಂಸ್ಕಾರವನ್ನು ಮೂಡಿಸುತ್ತದೆ. ಸೌಂದರ್ಯ ಪ್ರಜ್ಞೆಯನ್ನು ಜಾಗೃತಗೊಳಿಸಿ ಬದುಕಿನಲ್ಲಿ ನೆಮ್ಮದಿಯನ್ನು ತಂದುಕೊಳ್ಳಲು ನೆರವಾಗುತ್ತದೆ. ಶರೀರದ ಬೆಳವಣಿಗೆಗೆ ಆಹಾರ ಎಷ್ಟು ಅಗತ್ಯವೋ, ಮನಸ್ಸಿನ ಬೆಳವಣಿಗೆಗೆ, ಸಂಸ್ಕಾರಕ್ಕೆ ಕಲೆ ಅಷ್ಟೇ ಅವಶ್ಯಕ. ಈ ಅರ್ಥದಲ್ಲಿ ೧೯೮೫ರ ನೋಬೆಲ್ ಪಾರಿತೋಷಕ ವಿಜೇತ ಕ್ಲಾಡ್ ನೇಮೊ ಹೇಳುವ "ಮಾನವನ ಬದುಕಿಗೆ ಹಸಿವು, ತೃಷೆ, ಉಸಿರಾಟದಷ್ಟೇ ಅಗತ್ಯವಾದುದು ಕಲೆ ಮತ್ತು ಸಾಹಿತ್ಯ" ಎಂಬ ಮಾತು ಗಮನಾರ್ಹವೆನಿಸುತ್ತದೆ. ಒಂದು ರೀತಿಯಲ್ಲಿ ಮಾನವ ಬದುಕಿಗೆ ಅರ್ಥಪೂರ್ಣತೆ ಲಭಿಸುವುದು ಕಲೆಯಿಂದಲೆ. "ಇದರಲ್ಲಿ ಬಹಳ ಮುಖ್ಯವಾದ ಸಂವೇದನೆಗೆ ಹತ್ತಿರವಾದ ಕಲೆಯೆಂದರೆ 'ಜನಪದ ಕಲೆ' ಎನ್ನುವುದು ಎಲ್ಲರೂ ಒಪ್ಪಿಕೊಂಡ ಮಾತು.

ಕಲೆ ಮನುಷ್ಯನ ಜೊತೆ ಜೊತೆಯಲ್ಲಿಯೇ ಬೆಳೆದು ಬಂದುದು. ನೈಸರ್ಗಿಕ ಪ್ರಕ್ರಿಯೆಗಳ ಬಗೆಗಿನ ಭಯ - ಭಕ್ತಿ ದೈವತ್ವದ ಕಲ್ಪನೆಗೆ ಎಡೆಮಾಡಿಕೊಟ್ಟಿದ್ದರೆ, ಆದಿಮಾನವ ಆ ದೈವ ಪರಿಕಲ್ಪನೆಯು ಆತನ ಎಲ್ಲಾ ಕಲೆ ಹಾಗೂ ಸಾಹಿತ್ಯಗಳಿಗೂ ಮೂಲ ಮಾತೃಕೆಯಾಗಿದೆ. ದೈವದ ಬಗೆಗಿನ ಚಿಂತನೆ ಸಾಹಿತ್ಯ ಸೃಷ್ಠಿಗೆ ಕಾರಣವಾಗಿದ್ದರೆ ದೈವದ ಮುಂದೆ ಹಾಡಿ ಕುಣಿದುದು ಸಂಗೀತ ನೃತ್ಯಗಳಿಗೆ, ದೈವಕ್ಕೆ ಕಟ್ಟಿದ ಆವಾಸ ಮಾಡಿದ ಅಲಂಕಾರಗಳು ಶಿಲ್ಪ - ಚಿತ್ರಕಲೆಗಳಿಗೆ ಕಾರಣವಾದವು. ಹಾಗೆಯೇ ದಿನನಿತ್ಯದ ವ್ಯವಹಾರಗಳಲ್ಲಿ ತನ್ನನ್ನು ಅಲಂಕರಿಸಿಕೊಳ್ಳುವಲ್ಲಿ ತನ್ನ ಕೆಲಸ - ಕಾರ್ಯಗಳನ್ನು ಹಗರು ಮಾಡಿಕೊಳ್ಳುವಲ್ಲಿ, ಶ್ರಮವನ್ನು ಮರೆತು ಕೆಲಕಾಲ ಆನಂದದಲ್ಲಿ ಮೈಮರೆಯುವಲ್ಲಿ ಹೀಗೆ ಬದುಕಿನ ಎಲ್ಲಾ ಸ್ತರಗಳಲ್ಲಿ ಹೊಸತನವನ್ನು ರೂಪಿಸಿಕೊಳ್ಳುತ್ತಾ ಬಂದ. ಬರುಬರುತ್ತಾ ವಿವಿಧ ವೃತ್ತಿ ವಿಶೇಷಗಳಲ್ಲಿ, ಮನೆಗೆಲಸಗಳಲ್ಲಿ ಒಟ್ಟಾರೆ ಅವನ ಸಾಧನೆಯ ಎಲ್ಲ ಮಗ್ಗಲುಗಳಿಗೂ ಕಲೆಯ ಸ್ಪರ್ಶ ಅನಿವಾರ್ಯವೆನಿಸಿತು. ಮೊದಮೊದಲು ಸರಳವಾಗಿದ್ದ ಕಲೆಗಳು ಕಾಳಕಳೆದಂತೆ ಅವಶ್ಯಕತೆಗಳು ಹೆಚ್ಚಿದಂತೆ, ಬುದ್ಧಿ ವಿಕಾಸಗೊಂಡಂತೆ ಸಂಕೀರ್ಣವಾಗುತ್ತಾ ಬಂದು ಶಿಷ್ಠ ಕಲೆಗಳಿಗೆ ಮಾತೃಕೆಗಳಾದವು.

"ಜೀವನವೆಂಬುದು ಸಾಗರ ಹೊಳೆಯವ್ವ, ಈಸಬಲ್ಲವಾಗ ಎದೆಯುದ್ಧ" ಎಂದು ಹೇಳಿದ ಜನಪದರು ಜೀವನವನ್ನೇ ಕಲೆಯಾಗಿಸಿಕೊಂಡವರು. ಪೀಳಿಗೆಯಿಂದ ಪೀಳಿಗೆಗೆ ಮುಂದುವರೆದುಕೊಂಡು ಬರುವ ಜನಪದ ಕಲಾ ಪ್ರಪಂಚ ವ್ಯಾಪಕ ಹಾಗೂ ವೈವಿಧ್ಯಪೂರ್ಣವಾದುದು.೨

**ಅಡಿಟಿಪ್ಪಣಿ**

೧. ಡಾ.ಎಚ್ .ಜೆ.ಲಕ್ಕಪ್ಪಗೌಡ (ಸಂ), ಪುರುಷೋತ್ತಮ ಬಿಳಿಮಲೆ (ಲೇ), ತಿ,ನಂ,ಶಂಕರನಾರಾಯಣ, ಅಂಬಳಿಕೆ ಹಿರಿಯಣ್ಣ, ಎ.ವಿ.ನಾವಡ, ಶ್ರೀರಾಮ ಇಟ್ಟಣ್ಣವರ, ಜನಪದ ಕೈಪಿಡಿ

೨. ಕರ್ನಾಟಕ ಜಾನಪದ ಅಕಾಡೆಮಿ ಹಾಗೂ ಕನ್ನಡ ವಿಶ್ವವಿದ್ಯಾಲಯ, ಜಾನಪದ ಅಧ್ಯಯನ ವಿಭಾಗ ಸಂಯುಕ್ತವಾಗಿ ಏರ್ಪಡಿಸಿದ್ದ ಜಾನಪದ ಮತ್ತು ಮಹಿಳೆ ವಿಚಾರ ಸಂಕೀರ್ಣದ ಪ್ರಸ್ತುತ ಪ್ರಬಂಧ

೩. ಗೊ.ರು.ಚನ್ನಬಸಪ್ಪ (ಸಂ), ಕರ್ನಾಟಕ ಜನಪದ ಕಲೆಗಳು

# ೨

# ಮುದಿಮಲ್ಲಪ್ಪನವರ ಜೀವನ ಚರಿತ್ರೆ

## ೨.೧ ಭೌಗೋಳಿಕ ಪರಿಸರ

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನಿಂದ ಹನ್ನೆರಡು ಕಿ.ಮೀ. ದೂರದ ವ್ಯಾಪ್ತಿಯಲ್ಲಿ ಬರುವ ಒಂದು ಚಿಕ್ಕ ಗ್ರಾಮವೇ 'ಸೊನ್ನ' ಈ ತಾಲೂಕಿನ ಉತ್ತರದಲ್ಲಿ ರಾಯಚೂರು ಜಿಲ್ಲೆ, ಪೂರ್ವದಲ್ಲಿ ಹೊಸಪೇಟೆ ಮತ್ತು ಕೂಡ್ಲಿಗಿ ತಾಲೂಕು ದಕ್ಷಿಣದಲ್ಲಿ ಹರಪನಹಳ್ಳಿ ತಾಲೂಕು, ಪಶ್ಚಿಮದಲ್ಲಿ ಹಡಗಲಿ ತಾಲೂಕು ಸುತ್ತುವರಿದುಕೊಂಡಿವೆ. ಪಶ್ಚಿಮಭಾಗದಲ್ಲಿ ಬರುವ ಗ್ರಾಮವೇ 'ಸೊನ್ನ'. ಈ ಗ್ರಾಮಕ್ಕೆ ಹೋಗುತ್ತಿದ್ದಂತೆ ಆರಂಭದಲ್ಲಿ ಒಂದು ಸುಂದರವಾದ ಪುಟ್ಟ ಕೆರೆಯೊಂದು ಪ್ರಯಾಣಿಕರನ್ನು ಸ್ವಾಗತಿಸುತ್ತದೆ. ಈ ಗ್ರಾಮದಲ್ಲಿ ಐದುಸಾವಿರಕ್ಕಿಂತ ಹೆಚ್ಚು ಜನಸಂಖ್ಯೆಯನ್ನು ಹೊಂದಿದೆ. ನಾಲ್ಕುನೂರಕ್ಕೂ ಹೆಚ್ಚು ಮನೆಗಳಿವೆ. ಹಲವಾರು ವರ್ಗ, ವರ್ಣ, ಜಾತಿ-ಪಂಗಡಗಳ ಜನರು ವಾಸಿಸುತ್ತಾರೆ. ಅಲ್ಲಿನ ಜನರ ಮುಖ್ಯ ಉದ್ಯೋಗ ವ್ಯವಸಾಯ. ಬಳ್ಳಾರಿ ಜಿಲ್ಲೆ ಬರಗಾಲಕ್ಕೆ ಹೆಸರುವಾಸಿಯಾಗಿರುವ ಪ್ರದೇಶವಾಗಿದ್ದರಿಂದ ಹಗರಿ ಬೊಮ್ಮನಹಳ್ಳಿ ತಾಲೂಕಿನಲ್ಲಿ ಸಹ ಬಿಸಿಲಿನ ಪ್ರಖರತೆ ಹೆಚ್ಚಾಗಿರುತ್ತದೆ.

ಗ್ರಾಮದ ಸುತ್ತಲೂ ಕೋಟೆಯಂತೆ ಕಣಗಳನ್ನು ಮಾಡಿದ್ದಾರೆ. ಈ ಕಣಗಳಲ್ಲಿ ದನಗಳಿಗೆ ಮೇವು ಸಂಗ್ರಹಿಸಿಡುತ್ತಾರೆ. ಮತ್ತು ದವಸ-ಧಾನ್ಯಗಳ ಒಕ್ಕಲುತನವನ್ನು ಸಹ ಮಾಡುತ್ತಾರೆ. ಗ್ರಾಮದ ಅಕ್ಕ-ಪಕ್ಕದಲ್ಲಿ ಎಲ್ಲಿ ನೋಡಿದರು ಹೊಲಗಳೇ ಕಾಣಿಸುತ್ತವೆ. ಹಗರಿಬೊಮ್ಮನಹಳ್ಳಿ ತಾಲೂಕಿನ ಗ್ರಾಮಗಳಲ್ಲೇ ನೀರಿನ ಅಭಾವ ಹೊಂದಿದ ಗ್ರಾಮಗಳೆಂದರೆ, 'ಸೊನ್ನ-ಮೋರಗೇರಿ' ಎಂದು ಜನರು ಸಹಜವಾಗಿ

ಗುರುತಿಸುತ್ತಾರೆ. ಮಳೆಗಾಲದಲ್ಲಿ ರಸ್ತೆಬದಿಯ ಇಕ್ಕೆಲಗಳಲ್ಲಿ ಬೆಳೆದ ಗಿಡ ಮರಗಳು ನೋಡಲು ಚೆನ್ನಾಗಿ ಕಾಣಿಸುತ್ತವೆ. ಹಾಗೂ ಗ್ರಾಮದ ಸುತ್ತಲಿರುವ ಹೊಲಗಳು ಹಚ್ಚ ಹಸಿರಿನಿಂದ ಕಂಗೊಳಿಸುತ್ತಿರುತ್ತವೆ. ಈ ಗ್ರಾಮದಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಹಾಗೂ ಪ್ರೌಢಶಾಲೆಗಳಿವೆ. ಜ್ಞಾನಾರ್ಜನೆಗಾಗಿ ಒಂದು ಗ್ರಂಥಾಲಯ ಇದೆ. ಜೊತೆಗೆ ಚಿಕ್ಕಮಕ್ಕಳಿಗೆ ಮೂರು ಅಂಗನವಾಡಿ ಕೇಂದ್ರಗಳಿವೆ. ಹಾಗೂ ಗ್ರಾಮಕ್ಕೆ ಸಾರಿಗೆ ಸಂಪರ್ಕದ ವ್ಯವಸ್ಥೆ ಕೂಡ ತುಂಬಾ ಚೆನ್ನಾಗಿದೆ. ಚಿಕ್ಕದಾದ ಒಂದು ಬಸ್ಸಿನ ತಂಗುದಾಣವನ್ನು ಹೊಂದಿದೆ; ಊರಿನ ಗ್ರಾಮಸ್ಥರು ಪರಸ್ಪರ ಸಹಕಾರ - ಸಹಬಾಳ್ವೆಯಿಂದ ಎಲ್ಲರೂ ಹೊಂದಿಕೊಂಡು ಬಾಳುತ್ತಾರೆ. ಮತ್ತು ಗ್ರಾಮದ ಏಳಿಗೆಗಾಗಿ ಒಂದು ಗ್ರಾಮಪಂಚಾಯ್ತಿ ಸಹ ಇದೆ. ಈ ಪ್ರದೇಶದಲ್ಲಿ ಕೆಂಪು ಮತ್ತು ಕಪ್ಪುಮಣ್ಣಿನ ಭೂಮಿ ಹೆಚ್ಚು ಇರುವುದು ಕಂಡುಬರುತ್ತವೆ. ಹಾಗೂ ನೀರಾವರಿ ಭೂಮಿಗಿಂತ ಮಳೆ ಆಶ್ರಯದ ಭೂಮಿ ಹೆಚ್ಚಿನ ಸಂಖ್ಯೆಯಲ್ಲಿದೆ. ಆದ್ದರಿಂದ ಹಿಂಗಾರು ಮತ್ತು ಮುಂಗಾರು ಎರಡು ಕಾಲಗಳಲ್ಲಿ ಬೇಸಾಯ ನಡೆಯುತ್ತದೆ. ಮುಂಗಾರುವಿನಲ್ಲಿ ಜೋಳ ಮತ್ತು ಭತ್ತವನ್ನು; ಹಿಂಗಾರುವಿನಲ್ಲಿ ನವಣೆ, ಹುಳ್ಳಿ, ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ. ಹತ್ತಿ, ಶೇಂಗಾ, ನೆಲಗಡಲೆ, ಸೂರ್ಯಕಾಂತಿ, ಮೆಕ್ಕೆಜೋಳ, ಗುರಾಳು, ಎಳ್ಳು, ಕಬ್ಬು, ಈರುಳ್ಳಿ ಮುಖ್ಯ ವಾಣಿಜ್ಯ ಬೆಳೆಗಳಾಗಿವೆ. ದ್ವಿದಳ ಧಾನ್ಯಗಳಾದ ತೊಗರಿ, ಹೆಸರು, ಅಲಸಂಧಿ, ಮಡಿಕೆ ಸಹ ಬೆಳೆಯುತ್ತಾರೆ.

## ೨.೨ ಜನನ - ಬಾಲ್ಯಜೀವನ

ಬಳ್ಳಾರಿ ಜಿಲ್ಲಾ ಹಗರಿಬೊಮ್ಮನಹಳ್ಳಿ ತಾಲೂಕು 'ಸೊನ್ನ' ಗ್ರಾಮದವರಾದ ರಾಮಪ್ಪ - ಮಾಳವ್ವ ಎಂಬ ದಂಪತಿಗಳ ಉದರದಲ್ಲಿ ಮುದಿಮಲ್ಲಪ್ಪನವರು ಜನಿಸಿರುತ್ತಾರೆ. ಇವರ ಮೂಲ ಕಸುಬು ವ್ಯವಸಾಯ. ಅವಿದ್ಯಾವಂತರಾದ ಇವರ ತಂದೆ-ತಾಯಿಗಳು ತಮ್ಮ ಮಗನನ್ನು ಶಾಲೆಗೆ ಕಳುಹಿಸಲಿಲ್ಲ. ತಮ್ಮಂತೆಯೇ ಮಗನನ್ನು ಅವಿದ್ಯಾವಂತನನ್ನಾಗಿ ಮಾಡಿ, ಚಿಕ್ಕ ವಯಸ್ಸಿನಲ್ಲಿಯೇ ಆತನನ್ನು ಹೊಲದಲ್ಲಿ ಕೆಲಸ ಮಾಡಲಿಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಕಾರಣ ಬಡತನದ ಸಮಸ್ಯೆಯನ್ನು ಎದುರಿಸುತ್ತಿದ್ದ ತಂದೆ-ತಾಯಿ ವ್ಯವಸಾಯದಲ್ಲಿ ತಮ್ಮ ಜೊತೆಗೆ ಆಸರೆಯಾಗಲಿಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಆದ್ದರಿಂದ ಮುದಿಮಲ್ಲಪ್ಪನವರು ತಮ್ಮ ಬಾಲ್ಯದಲ್ಲಿ ವಿದ್ಯಾಭ್ಯಾಸದಿಂದ ದೂರ ಉಳಿಯಬೇಕಾಯಿತು. ಮುದಿಮಲ್ಲಪ್ಪನವರ ಅಜ್ಜನಾದ ಸಕ್ರಜ್ಜನು ಡೊಳ್ಳು ಬಡಿಯುವ ಕಲೆಯನ್ನು ರೂಢಿಸಿಕೊಂಡಿದ್ದರು. ಇವರು ಪ್ರತಿದಿನ ರಾತ್ರಿ ಊರಿನ ಸೊಲ್ಲಮ್ಮದೇವಿಯ ಗುಡಿಯ ಮುಂದೆ ಡೊಳ್ಳನ್ನು ಬಡಿಯುತ್ತಿದ್ದರು. ಆದರೆ ಮುದಿಮಲ್ಲಪ್ಪನವರು ಹೊಲದಿಂದ ಮನೆಗೆ ಬಂದ ತಕ್ಷಣ ಅವಸರವಾಗಿ ಅಜ್ಜನ ಡೊಳ್ಳುಬಡಿತವನ್ನು ನೋಡಲಿಕ್ಕೆ ಓಡಿಹೋಗುತ್ತಿದ್ದರು.

ಹಳ್ಳಿಯಲ್ಲಿ ಜನರು ಹಗಲೆಲ್ಲ ಹೊಲದಲ್ಲಿ ಕೆಲಸಮಾಡಿ ಮೈದಣಿಸಿಕೊಂಡು ಬಂದು, ರಾತ್ರಿ ಉಂಡಮ್ಯಾಲೆ ಬ್ಯಾಸರ ಕಳೆಯಲಿಕ್ಕೆಂದು ಗುಡಿಯ ಹತ್ತಿರ ಸೇರುತ್ತಿದ್ದರು. ಆ ಸಮಯದಲ್ಲಿ ಸಕ್ರಜ್ಜನು ಡೊಳ್ಳು ಬಡಿಯುತ್ತಿದ್ದನು. ಜೊತೆಗೆ ಹಳ್ಳಿಯ ಹುಡುಗರಿಗೆ ಸಹ ಹೇಳಿಕೊಡುತ್ತಿದ್ದರು. ಆಗ

ಮುದಿಮಲ್ಲಪ್ಪನವರು ತಮ್ಮ ಜೊತೆಗಾರರೊಡನೆ ಸೇರಿಕೊಂಡು, ತಮ್ಮಜ್ಜನು ಬಡಿಯುತ್ತಿದ್ದ ಡೊಳ್ಳನ್ನು ನೋಡಲಿಕ್ಕೆ ಹೋಗುತ್ತಿದ್ದರು. ಅಜ್ಜನು ಡೊಳ್ಳು ಬಡಿಯುವುದನ್ನು ನೋಡು ನೋಡುತ್ತಿದ್ದಂತೆಯೇ ಡೊಳ್ಳಿನ ನಾದಕ್ಕೆ ತಲೆ ತೂಗುವುದು, ತನ್ನ ಎರಡು ಕೈಗಳನ್ನು ಕುಂಡಿಗೆ ಬಡಿದುಕೊಳ್ಳುತ್ತಾ ಜಿಗಿದು ಜಿಗಿದು ಹಾರುತ್ತಾ ಕುಣಿಯುತ್ತಿದ್ದರು. ರಾತ್ರಿ ಎಷ್ಟೋ ಹೊತ್ತು ಆದ್ರೂ ಸಹ ಅವರು ಮನೆಗೆ ಬರುತ್ತಿರಲಿಲ್ಲ. ಅಜ್ಜನ ಜೊತೆಯಲ್ಲಿ ಮನೆಗೆ ಬರಬೇಕಿತ್ತು, ಮುದಿಮಲ್ಲಪ್ಪನವರು ಅಜ್ಜನ ಪ್ರೀತಿಯ ಹಾರೈಕೆಯಲ್ಲಿ ಬೆಳೆದು ಅಜ್ಜನಂತೆ ತಾನು ಡೊಳ್ಳು ಬಡಿಯುವುದನ್ನು ಕಲಿಯಬೇಕೆಂಬ ಬಯಕೆ ಚಿಕ್ಕ ವಯಸ್ಸಿನಲ್ಲಿಯೇ ಮೂಡಿಬಂದಿತು. ಅಜ್ಜನು ಹಬ್ಬ-ಹುಣ್ಣಿಮೆಗಳಲ್ಲಿ ಡೊಳ್ಳನ್ನು ಬಡಿಯಲಿಕ್ಕೆ ಹೋಗುವ ಸಮಯದಲ್ಲಿ ಸಾಕಷ್ಟು ಪೀಡಿಸುತ್ತಿದ್ದರು. ನಾನು ಬರುತ್ತೇನೆ, ನಾನು ಡೊಳ್ಳು ಬಡಿಯುತ್ತೇನೆ ಎಂದು ತುಂಬಾ ಹಠಮಾಡುತ್ತಾ ಅಜ್ಜನ ಹತ್ತಿರವಿರುವ ಡೊಳ್ಳನ್ನು ಕಸಿದುಕೊಳ್ಳಲಿಕ್ಕೆ ಹೋಗುತ್ತಿದ್ದರಂತೆ. ಆ ಸಮಯದಲ್ಲಿ ಅಜ್ಜನವರು ಅವರನ್ನು ಸಮಧಾನಪಡಿಸಿ ಎತ್ತಿಕೊಂಡು ಮುದ್ದಾಡಿ ರಮಿಸಿ ಕಳುಸುತ್ತಿದ್ದರು.

ತಮ್ಮ ಬಾಲ್ಯವನ್ನು ತನ್ನ ಅಜ್ಜನೊಂದಿಗೆ ಜೊತೆಗೂಡಿ ಆಟಗಳನ್ನು ಆಡುತ್ತಾ ದೇವರ ಹಾಡುಗಳನ್ನು, ಕಥೆಗಳನ್ನು ಕೇಳುತ್ತಿದ್ದರು. ಹೀಗೆ ಹಲವು ಬಾರಿ ತಮ್ಮಜ್ಜನನ್ನು ಪೀಡಿಸುತ್ತಾ ತಂದೆ-ತಾಯಿಯರನ್ನು ಸಹ ಚೇಡಿಸುತ್ತಾ ತಮ್ಮ ಬಾಲ್ಯವನ್ನು ಕಳೆದರು. ತಮ್ಮ ಸ್ನೇಹಿತರ ಜೊತೆಗೂಡಿ ಹಲವಾರು ಆಟಗಳನ್ನು ಆಡುತ್ತಿದ್ದರು. ಅವರು ಹೆಚ್ಚಾಗಿ ಗುಂಪು ಆಟದಲ್ಲೇ ಪಾಲುಗೊಳ್ಳುತ್ತಿದ್ದರಂತೆ ಆದ್ದರಿಂದ ಅವರಲ್ಲಿ ಚಿಕ್ಕವಯಸ್ಸಿನಲ್ಲೇ ನಾಯಕತ್ವದ ಗುಣವನ್ನು ಹೊಂದಿದವರಾಗಿದ್ದರು. ಮೊಮ್ಮಗನ ಪ್ರೀತಿ - ವಾತ್ಸಲ್ಯಕ್ಕೆ ಮನಸೋತು ಪ್ರೀತಿಯ ಹಾರೈಕೆಯಲ್ಲಿ ಬೆಳೆಸಿದರು. ತಮ್ಮಜ್ಜನಂತೆ ನಾನು ಕೂಡ ಡೊಳ್ಳು ಬಡಿಯುವ ಕಲೆಗಾರಿಕೆಯನ್ನು ಕಲಿಯಬೇಕೆಂಬ ಹಂಬಲ ದಿನದಿನಕ್ಕೂ ಹೆಚ್ಚಾಗುತ್ತಾ ಹೋಯಿತು. ಅಜ್ಜ ಇಲ್ಲದ ಸಮಯದಲ್ಲಿ ಡೊಳ್ಳಿನ ಜೊತೆಗೆ ಆಟವಾಡುತ್ತಿದ್ದನು. ಕೈಯಿಗೆ ಸಿಕ್ಕ ಒಂದು ಕೋಲನ್ನು ಹಿಡಿದುಕೊಂಡು, ಹೆಗಲಿಗೆ ಒಂದು ಟವಲನ್ನು ಹಾಕಿಕೊಂಡು ಡೊಳ್ಳನ್ನು ಬಡಿಯುವ ಪ್ರಯತ್ನವನ್ನು ಚಿಕ್ಕವಯಸ್ಸಿನಲ್ಲಿ ಮಾಡುತ್ತಿದ್ದನ್ನು ನೋಡಿ ಅದನ್ನೆಲ್ಲ ಗಮನಿಸಿದ ಅಜ್ಜನು ತಮ್ಮ ಮೊಮ್ಮಗನಿಗೆ ಡೊಳ್ಳುಬಡಿಯುವ ಹುಚ್ಚು ಇದೆ ಎಂದು ತಿಳಿದು ಪ್ರತಿದಿವಸ ಡೊಳ್ಳುಬಡಿಯುವುದನ್ನು ಹೇಳಿಕೊಡಲಿಕ್ಕೆ ಶುರುಮಾಡಿದರು. ಅಜ್ಜನು ಪ್ರೀತಿ-ಮಮಕಾರದಿಂದ ಡೊಳ್ಳು ಬಡಿಯುವುದನ್ನು ಪ್ರತಿದಿವಸ ಅಭ್ಯಾಸ ಮಾಡಿಸುತ್ತಾ ಬಂದರು. ಮುದಿಮಲ್ಲಪ್ಪನವರು ಸುಮಾರು ತಮ್ಮ ೧೦ನೇ ವಯಸ್ಸಿನಲ್ಲಿಯೇ ಡೊಳ್ಳು ಬಡಿಯಲು ಆರಂಭಿಸಿದರು.

ಅಂದಿನ ಕಾಲದಲ್ಲಿ ಸಕ್ರಜ್ಜನವರು ಡೊಳ್ಳು ಬಡಿಯುವ ಕಲೆಯಲ್ಲಿ ತುಂಬಾ ಪ್ರಸಿದ್ಧರಾಗಿದ್ದರು. ಸುತ್ತಮುತ್ತಲಿನ ಊರುಗಳಿಗೆ ಹೋಗಿ ಜಾತ್ರೆ, ಹಬ್ಬ, ಹುಣ್ಣಿಮೆ, ಉತ್ಸವಗಳಲ್ಲಿ ಡೊಳ್ಳಿನ ಕಾರ್ಯಕ್ರಮವನ್ನು ಕೊಟ್ಟು ಬರುತ್ತಿದ್ದರು. ಕ್ರಿ.ಶ. ೧೯೨೭ರಲ್ಲಿ ಉಜ್ಜಯನಿ ಮಠದ ಸ್ವಾಮಿಗಳು ಸೊನ್ನದ ಗ್ರಾಮಕ್ಕೆ ಆಗಮಿಸಿದರು. ಆಗ ಸಕ್ರಜ್ಜನವರು ತಮ್ಮ ಡೊಳ್ಳಿನ ಪ್ರದರ್ಶನವನ್ನು ಸ್ವಾಮಿಗಳ ಮುಂದೆ ಪ್ರದರ್ಶಿಸಿದರು. ಸ್ವಾಮಿಗಳು ಈ ಕಲೆಯನ್ನು ನೋಡಿ ಮೆಚ್ಚುಗೆ ವ್ಯಕ್ತಪಡಿಸಿ, ಸಕ್ರಜ್ಜನವರಿಗೆ ೨೪ ತೊಲೆಯ ಬೆಳ್ಳಿಯ 'ಜಂಗ್'ನ್ನು (ಪದಕ)

ಕಾಣಿಕೆಯಾಗಿ ನೀಡಿದರು. ಇದರಿಂದ ಮತ್ತಷ್ಟು ಕಲೆಗೆ ಪ್ರೋತ್ಸಾಹ ದೊರೆಯಿತು. ಮುಂದೆ ಡೊಳ್ಳು ಬಡಿಯುವ ಕಲೆಯನ್ನು ನನ್ನ ಕಾಲಕ್ಕೆ ಸೀಮಿತಗೊಳ್ಳಬಾರದೆಂದು ತಮ್ಮ ಮೊಮ್ಮಗನಿಗೆ ಈ ಕಲೆಯನ್ನು ಕಲಿಸಿಕೊಟ್ಟು ಕಲೆಯ ಉಳುವಿಗಾಗಿ ಶ್ರಮಿಸಿ ಡೊಳ್ಳಿನ ಕಲೆಯನ್ನು ನೀರೆರೆದು ಪೋಷಿಸಿ ಬೆಳೆಸಿದರು. ಅವರ ಮನೆಯಲ್ಲಿ ತುಂಬಾ ಬಡತನವಿತ್ತು. ಆದರೂ ಕಲೆಗೆ ಎಂದಿಗೂ ಮರೆಯಲಿಲ್ಲ. ಬಡತನದ ಬೇಗೆಯಲ್ಲಿ ಜೀವನ ಸಾಗಿಸಿದರು. ಜೊತೆಗೆ ಕಲೆಯನ್ನು ಉಳಿಸಿ-ಬೆಳೆಸಿದರು. ಆಸ್ತಿ ಮತ್ತು ಹಣದಲ್ಲಿ ಬಡತನ ಹೊಂದಿದ್ದರೂ, ಡೊಳ್ಳಿನ ಕಲೆಯಲ್ಲಿ ಅವರು ಶ್ರೀಮಂತರಾಗಿದ್ದರು.

### ೨.೩ ಕೌಟಂಬಿಕ ಜೀವನ

ಮುದಿಮಲ್ಲಪ್ಪನವರ ಪೂರ್ವಜರು ಹಡಗಲಿ ತಾಲೂಕು ಹಮ್ಮಿಗಿ ಗ್ರಾಮದಲ್ಲಿ ಹಲವು ವರ್ಷಗಳ ಕಾಲ ಬಾಳಿದರು. ಅಲ್ಲಿಂದ ದುಡಿಮೆಯನ್ನು ಆಶ್ರಯಿಸಿ ಹಗರಿಬೊಮ್ಮನಹಳ್ಳಿ ತಾಲೂಕಿನ 'ಸೊನ್ನ'ದ ಗ್ರಾಮಕ್ಕೆ ಬಂದು ನೆಲೆಯೂರಿದರು. ಇವರು ಹಾಲುಮತದ ಕುರುಬರ ಮನೆತನಕ್ಕೆ ಸೇರಿದವರಾಗಿದ್ದು, ಪೂರ್ವಜರು 'ಹಮ್ಮಿಗಿ'ಯಲ್ಲಿ ಕೆಲವು ವರ್ಷಗಳನ್ನು ಕಳೆದಿದ್ದರಿಂದ 'ಹಮ್ಮಿಗಿ' ಎಂಬ ಗ್ರಾಮದ ಹೆಸರು, ಇವರ ಮನೆತನದ ಹೆಸರಾಗಿ ಉಳಿದುಕೊಂಡು ಬಂದಿದೆ. ಇವರ ಕುಟುಂಬದ ಕರ್ತೃಗಳಾದ ರಾಮಪ್ಪ - ಮಾಳಮ್ಮ ಎಂಬ ದಂಪತಿಗಳ ಉದರದಲ್ಲಿ ನಾಲ್ಕು ಜನ ಗಂಡುಮಕ್ಕಳು ಹಾಗೂ ಒಂದು ಹೆಣ್ಣುಮಗಳಿಗೆ ಜನ್ಮನೀಡಿದರು. ಮನೆಯ ಹಿರಿಯ ಮಗನಾಗಿ ಮುದಿಮಲ್ಲಪ್ಪನವರು ಹುಟ್ಟಿದರು. ನಂತರ ಮಾಳಮ್ಮ ಎಂಬ ಹೆಣ್ಣುಮಗಳು, ತದನಂತರ ಕರಿಯಲ್ಲಪ್ಪ, ಇವರ ನಂತರ ಗುಡ್ಡಪ್ಪ, ನಂತರ ಮಹಾಲಿಂಗಪ್ಪ ಹುಟ್ಟಿದರು. ಇವರ ತಂದೆಯ ಮುಖ್ಯ ಉದ್ಯೋಗ ವ್ಯವಸಾಯ. ಇವರು ಪೂರ್ವಿಕರು ಬಿಟ್ಟುಹೋದ ಅಲ್ಪ - ಸ್ವಲ್ಪ ಭೂಮಿಯಲ್ಲಿ ವ್ಯವಸಾಯ ವೃತ್ತಿಯನ್ನು ಮಾಡುತ್ತಿದ್ದರು. ಹಗಲು - ರಾತ್ರಿ ಎನ್ನದೆ ಹೊಲದಲ್ಲಿ ಕೆಲಸ ಮಾಡಿಕೊಂಡು ಬಂದು ತಮ್ಮ ಮಕ್ಕಳನ್ನು ಬೆಳೆಸಿದರು. ಇವರ ಕುಟುಂಬದಲ್ಲಿ ದಿನದಿಂದ ದಿನಕ್ಕೆ ಬಡತನದ ಸಮಸ್ಯೆಗಳು ಇದ್ದರೂ ದಿನಾಲು ಹೊಲದಲ್ಲಿ ಕೂಲಿ ಮಾಡಿಕೊಂಡು ಬಂದು ತಮ್ಮ ಮಕ್ಕಳನ್ನು ನೋಡಿಕೊಳ್ಳುತ್ತಿದ್ದರು. ಕುಟುಂಬದ ಹೊರೆಯನ್ನು ತಾಳಲಾರದೆ ತಮ್ಮ ಹಿರಿಯಮಗನಾದ ಮುದಿಮಲ್ಲಪ್ಪನನ್ನು ಕೆಲಸ ಮಾಡಲಿಕ್ಕೆಂದು ಚಿಕ್ಕವನಿದ್ದಾಗಲೇ ಅವರನ್ನು ಹೊಲಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಹೀಗೆ ತಂದೆ - ತಾಯಿಗಳ ಕಷ್ಟದಲ್ಲಿ ಪಾಲುಗೊಂಡು ತಮ್ಮ ಜೀವನವನ್ನು ಸಾಗಿಸುತ್ತಿದ್ದರು.

ದಿನಗಳು ಉರುಳಿದಂತೆಲ್ಲಾ ತಮ್ಮ ಇನ್ನುಳಿದ ಮಕ್ಕಳು ಸಹ ದುಡಿಯುವ ವಯಸ್ಸಿಗೆ ಬಂದರು. ತಂದೆಯಂತೆ ಮಕ್ಕಳು ಸಹ ವ್ಯವಸಾಯ ವೃತ್ತಿಯನ್ನು ಮುಂದುವರೆಸಿಕೊಂಡು ಹೋದರು. ತಮ್ಮ ಹಿರಿಯಮಗನಾದ ಮುದಿಮಲ್ಲಪ್ಪನವರಿಗೆ ೨೦ನೇ ವಯಸ್ಸಿನಲ್ಲಿ ವಿವಾಹ ಮಾಡಿ ತಮ್ಮ ಕುಟುಂಬದ ಹೆಚ್ಚಿನ ಜವಾಬ್ದಾರಿಯ ಹೊಣೆಯನ್ನು ಹೊರಿಸಿದರು. ಹಗಲು ರಾತ್ರಿ ಎನ್ನದೆ ದಿನಾಲು ಹೊಲದಲ್ಲಿ ಕೆಲಸ ಮಾಡಿಕೊಂಡು ಬರುತ್ತಿದ್ದರು. ಆಗಿನ ಕಾಲದಲ್ಲಿ ದುಡಿಮೆಗೆ ತಕ್ಕಂತೆ ಕೂಲಿ ಸಿಗುತ್ತಿರಲಿಲ್ಲ. ಹೆಚ್ಚಿನ ಶ್ರಮವಹಿಸಿ ಕೆಲಸ ಮಾಡಿದರು ಕೈಗೆ ಸಿಗುವುದು ಮೂರು-ನಾಲ್ಕು ಕಾಸು ಮಾತ್ರ. ಇದರಿಂದ ತಮ್ಮ ಜೀವನವನ್ನು

ಸಾಗಿಸುತ್ತಿದ್ದರು. ಹೀಗೆ ಹಲವು ದಿನಗಳಿಂದ ದುಡಿದುಕೊಂಡು ಬರುತ್ತಿದ್ದ ತಮ್ಮ ಇನ್ನುಳಿದ ಮೂರು ಮಕ್ಕಳಿಗೆ ಸಹ ಮದುವೆ ಮಾಡಿದರು. ಮುಂದೆ ತುಂಬಿದ ಕುಟುಂಬವಾಗಿ ಬೆಳೆದಿದ್ದರಿಂದ ಹೆಚ್ಚಾಗಿ ದುಡಿಯುವ ಸಂದರ್ಭ ಬಂದಿತು. ಹಲವು ದಿನಗಳ ಕಾಲ ಅಣ್ಣ - ತಮ್ಮಂದಿರು ಕೂಡಿಕೊಂಡು ಹೆಚ್ಚು ಶ್ರಮವಹಿಸಿ ಕೆಲಸವನ್ನು ನಿರ್ವಹಿಸಿದರೂ ಕುಟುಂಬದ ಜೀವನವನ್ನು ಸಾಗಿಸುವುದು ಕಷ್ಟವಾಗುತಿತ್ತು. ಆದ್ದರಿಂದ ಹೀಗೆ ಹಲವು ವರ್ಷಗಳ ಕಾಲ ಎಲ್ಲರೂ ಕೂಡಿ ಬಾಳಿದರು. ಮುಂದೆ ಕುಟುಂಬದಲ್ಲಿ ಜನರು ಹೆಚ್ಚಾದಂತೆಲ್ಲಾ ಎಲ್ಲರೂ ಒಟ್ಟಿಗೆ ಕೂಡಿ ಬಾಳುವುದಕ್ಕೆ ಕಷ್ಟವಾಗಿದ್ದರಿಂದ ಬೇರೆ ಮನೆಗಳನ್ನು ಮಾಡಿಕೊಂಡು ಜೀವನವನ್ನು ಸಾಗಿಸುತ್ತಾ ಬಂದರು.

ಕುಟುಂಬದ ಬಳ್ಳಿ

**ರಾಮಪ್ಪ - ಮಾಳವ್ವ* (ದಂಪತಿಗಳು)**




ಮುದಿಮಲ್ಲಪ್ಪ - ಹೊನ್ನಮ್ಮ ಎಂಬ ದಂಪತಿಗಳ ಉದರದಲ್ಲಿ ನಾಲ್ಕು ಜನ ಹೆಣ್ಣುಮಕ್ಕಳು ಎರಡು ಜನ ಗಂಡುಮಕ್ಕಳು ಹುಟ್ಟಿದರು. ಮೊದಲು ಹನುಮಂತಪ್ಪನವರಿಗೆ ಜನ್ಮನೀಡಿದರು, ನಂತರ ಶಿವಗಂಗಮ್ಮನಿಗೆ, ಇವರ ನಂತರ ಹಂಪಮ್ಮ, ಶಿವರಾಮಪ್ಪ, ಭಾಗ್ಯಮ್ಮ, ನಂತರ ಶಾಕುಂತಲಮ್ಮ ಹುಟ್ಟಿದರು. ಮುದಿಮಲ್ಲಪ್ಪನವರು ಚಿಕ್ಕವಯಸ್ಸಿನಲ್ಲೇ ಬಡತನದ ಬೇಗೆಯಲ್ಲಿ ಬಾಳಿದ್ದರಿಂದ ಮುಂದೆ ತಮ್ಮ ಕುಟುಂಬದಲ್ಲಿ ಸಾಕಷ್ಟು ಕಷ್ಟಗಳು ಎದುರಾದರೂ ಎದೆಗುಂದದೆ ದಿನಾಲು ಹೊಲದಲ್ಲಿ ಕೆಲಸ ಮಾಡಿಕೊಂಡು ಬರುತ್ತಿದ್ದರು ಹಾಗೂ ಇವರ ಮಡದಿಯಾದ ಹೊನ್ನಮ್ಮ ಸಹ ಸಂಸಾರದ ಕಷ್ಟವನ್ನು ನೀಗಿಸಲೆಂದು ತಾನು ಸಹಿತ ದಿನಾಲು ಹೊಲದಲ್ಲಿ ಕೂಲಿಕೆಲಸ ಮಾಡಲಿಕ್ಕೆ ಹೋಗುತ್ತಿದ್ದರು. ಹೀಗೆ ಸಂಸಾರವೆಂಬ ದೋಣಿಯನ್ನು ಸಾಗಿಸಲಿಕ್ಕೆ ಗಂಡ-ಹೆಂಡತಿ ಇಬ್ಬರೂ ಜೊತೆಯಾಗಿ ದುಡಿದು ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಹಾಗೂ ವಯಸ್ಸಾದ ತಂದೆ-ತಾಯಿಗಳನ್ನು ಮತ್ತು ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂಬುದು ಇವರ ಮನದಾಳದ ಬಯಕೆಯಾಗಿತ್ತು. ಮುಂದೆ ಕಾಲಕಳೆದಂತೆಲ್ಲ ತಮ್ಮ ತಂದೆ-ತಾಯಿಗಳು ಕಾಲವಾದರು. ಇದರಿಂದ ಬಹಳ ದು:ಖತಗೊಂಡ ಮುದಿಮಲ್ಲಪ್ಪನವರು ಇನ್ನು ಮುಂದೆಯಾದರೂ ತಮ್ಮ ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ಸಾಕಷ್ಟು ಕಷ್ಟಪಟ್ಟು ದುಡಿದು ಜೀವನವನ್ನು ಸಾಗಿಸುತ್ತಿದ್ದರು.

ಬಡತನದ ಬೇಗೆಯಲ್ಲಿದ್ದರೂ ಸಹ ತಮ್ಮಜ್ಜನು ಕಲಿಸಿಕೊಟ್ಟಂತಹ ಡೊಳ್ಳುಬಡಿಯುವ ವಿದ್ಯೆ (ಕಲೆ) ಯನ್ನು ಎಷ್ಟೇ ಕಷ್ಟಬಂದರೂ ಮುದಿಮಲ್ಲಪ್ಪನವರು ಬಿಡಲಿಲ್ಲ. ದಿನಂಪ್ರತಿ ಹೊಲದಲ್ಲಿ ಮೈ ಧಣಿಯುವಂತೆ

ಕೆಲಸಮಾಡಿಕೊಂಡು ಮನೆಗೆ ಬಂದರೂ ರಾತ್ರಿ ಸಮಯದಲ್ಲಿ ಅಜ್ಜ ಕಲಿಸಿಕೊಟ್ಟಂತಹ ಡೊಳ್ಳುಬಡಿಯುವ ಕಲೆಯನ್ನು ಅಭ್ಯಾಸ ಮಾಡುತ್ತಿದ್ದರು. ಒಂದು ಕಡೆ ಕುಟುಂಬದ ಭಾರವನ್ನು ಹೊತ್ತುಕೊಂಡು ಇನ್ನೊಂದು ಕಡೆ ಡೊಳ್ಳು ಬಡಿಯುವ ಕಲೆ ಉಳುವಿಗಾಗಿ ಸಾಕಷ್ಟು ಶ್ರಮಿಸಿದರು. ಹಗಲು - ರಾತ್ರಿಯೆನ್ನದೆ ಮೈಮುರಿದು ಕೆಲಸ ಮಾಡಿಕೊಂಡು ಬಂದರೂ ಸಹ ಇವರು ಡೊಳ್ಳುಬಡಿಯುವ ಕಲೆಗಾರಿಕೆಯನ್ನು ಮರೆಯಲಿಲ್ಲ. ದಿನಾಲು ರಾತ್ರಿ ಸಮಯದಲ್ಲಿ ಊರಿನ ಗ್ರಾಮದೇವತೆಯಾದ ಸೊಲ್ಲಮ್ಮನ ಗುಡಿಯ ಮುಂದೆ ಡೊಳ್ಳುಬಡಿಯುವ ತಯಾರಿಯನ್ನು ನಡೆಸುತ್ತಿದ್ದರು. ಇಂತಹ ಕಷ್ಟದ ಪರಿಸ್ಥಿತಿಯಲ್ಲಿ "ಬೇರೆಯವರ್ರಾಗಿದ್ರೇ ಯಾರ್‍ರಿಗೆಬೇಕೋ ಮರಾಯ ಈ ಡೊಳ್ಳು ಬಡಿಯುವ ಪರಿ. ಸುಮ್ಮನೆ ಮನೆಯ ಪರಿಸ್ಥಿತಿ ನೋಡಿಕೊಂಡು ಹೋಗೋದ್ರಾಗೇ ಸಾಕಾಗುತ್ತೈತಿ. ಹಗಲೆಲ್ಲ ದುಡಿದು ಬಂದು ಮೈಯಲ್ಲಾ ಧಣಿದುಕೊಂಡು ಇರ್ತೀವಿ. ರಾತ್ರಿ ಯಾವಾಗ ಆಗಿತಪ್ಪೋsss ಅಂಥ ಕಾಯುತ್ತಿರುತ್ತೀವೀ ಯಾವಾಗ ನೆಲ ಸಿಕ್ಕಿತಪೋ ಅನ್ನುತ್ತಿರುತ್ತೀವಿ ಅಂಥದ್ರಲ್ಲಿ ಈ ಡೊಳ್ಳು ಬಡಿಯುವುದು ಯಾರಿಗೆ ಬೇಕೋsss ಮರಾಯ" ಎಂದು ಸಮ್ಮನೆ ಇರುತ್ತಿದ್ದರು." ಆದರೆ ಮುದಿಮಲ್ಲಪ್ಪನವರು ತಮ್ಮ ಅಜ್ಜನವರು ಕಲಿಸಿಕೊಟ್ಟ ಕಲೆಯನ್ನು ಯಾವುದೇ ಕಷ್ಟಬಂದರೂ ಅದನ್ನು ಬಿಡುವ ಯೋಚನೆಯನ್ನು ಎಂದೂ ಮಾಡಲಿಲ್ಲ. ಸಮಯ ಸಿಕ್ಕಾಗ ದೇಹಕ್ಕೆ ವಿಶ್ರಾಂತಿಯನ್ನು ಕೊಡದೇ ಕೊರಳಿಗೆ ಡೊಳ್ಳನ್ನು ಹಾಕಿಕೊಂಡು ಹೊರಟರೆಂದರೆ ಮುಗಿಯಿತು. ಅವರ ಮನಸ್ಸಿಗೆ ಸಾಕಗುವಷ್ಟು ಡೊಳ್ಳನ್ನು ಬಡಿದು ಮಧ್ಯರಾತ್ರಿಯಲ್ಲಿ ಮನೆಗೆ ಬಂದು ಸೇರುತ್ತಿದ್ದರು. ಇಡೀ ರಾತ್ರಿ ಕಣ್ಣಿಗೆ ನಿದ್ದೆ ಇಲ್ಲದಿದ್ದರು ಸಹ ಬೆಳಿಗ್ಗೆ ಬೇಗ ಎದ್ದು ಹೊಲದ ಕೆಲಸಕ್ಕೆ ಹೋಗುತ್ತಿದ್ದರು. ಹೀಗೆ ಅವಿರತ ಶ್ರಮದಿಂದ ಡೊಳ್ಳು ಬಡಿಯುವ ಕಲೆಯನ್ನು ಕರಗತ ಮಾಡಿಕೊಂಡಿದ್ದರು.

ಮುದಿಮಲ್ಲಪ್ಪನವರು ಹಲವಾರು ಊರುಗಳಿಗೆ ಹೋಗಿ ತಮ್ಮ ಡೊಳ್ಳಿನ ಕಾರ್ಯಕ್ರಮವನ್ನು ನೀಡಿ ಬರುತ್ತಿದ್ದರು. ಆಗಿನ ಕಾಲದಲ್ಲಿ ಜನರು ದೇವರಲ್ಲಿ ತುಂಬಾ ಭಯ - ಭಕ್ತಿಯನ್ನಿಟ್ಟುಕೊಂಡಿದ್ದರಿಂದ ಸುತ್ತಮುತ್ತಲಿನ ಹಳ್ಳಿಗಳ ಜನರು ಹಬ್ಬ-ಹರಿದಿನಗಳಲ್ಲಿ ದೇವರ ಕಾರ್ಯಕ್ಕೆ ಡೊಳ್ಳಿನ ವಾದ್ಯಗಳನ್ನು ಉಪಯೋಗಿಸುತ್ತಿದ್ದರು. ಆದ್ದರಿಂದ ಮುದಿಮಲ್ಲಪ್ಪನವರನ್ನು ಹಬ್ಬದ ದಿನಗಳಲ್ಲಿ ಡೊಳ್ಳು ಬಡಿಯಲಿಕ್ಕೆಂದು ಕರೆಸಿಕೊಳ್ಳುತ್ತಿದ್ದರು. ಒಂದು ಕಾಲಘಟ್ಟದಲ್ಲಿ ಹಳ್ಳಿಯಿಂದ ಹಳ್ಳಿಗೆ ಹೋಗಲಿಕ್ಕೆ ಬಸ್ಸಿನ ಸೌಕರ್ಯಗಳು ಇರುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಇವರು ಡೊಳ್ಳನ್ನು ಹೆಗಲಿಗೆ ಹಾಕಿಕೊಂಡು ಹಲವಾರು ಮೈಲಿಗಳನ್ನು ಕಾಲುನಡುಗೆಯಲ್ಲೇ ಹೋಗಿ ಡೊಳ್ಳಿನ ಕಾರ್ಯಕ್ರಮವನ್ನು ನೀಡಿ ಬರುತ್ತಿದ್ದರು. ಬರುವ ಸಮಯದಲ್ಲಿ ಆ ಊರಿನ ಜನರು ದವಸ - ಧಾನ್ಯಗಳು ಹಾಗೂ ಪುಡಿಗಾಸನ್ನು ಕೊಟ್ಟುಕಳುಹಿಸುತ್ತಿದ್ದರು. ಜೊತೆಗೆ ಹೊಲದಲ್ಲಿ ಕೆಲಸ ಮಾಡಿಕೊಂಡು ಬಂದ ಆದಾಯದಿಂದ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಹೀಗೆ ದಿನಗಳು ಉರುಳಿದಂತೆಲ್ಲಾ ಮುದಿಮಲ್ಲಪ್ಪನವರು ಡೊಳ್ಳುಬಡಿಯುವ ಕಲೆಯಲ್ಲಿ ತುಂಬಾ ಪ್ರಸಿದ್ಧಿಗೊಂಡರು. ಇವರಿಗೆ ಊರಿಂದ ಊರಿಗೆ ಹೋಗಿ ಡೊಳ್ಳುಬಡಿಯುವ ಕಾರ್ಯಕ್ರಮ ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ಹೋದವು. ಇದರಿಂದ ಹೋದಲೆಲ್ಲಾ ಪ್ರೋತ್ಸಾಹ ಹಾಗೂ ಮೆಚ್ಚುಗೆ ದೊರೆಯುತ್ತಿತ್ತು. ತಮ್ಮ ಜೀವಿತದ ಅವಧಿಯಲ್ಲಿ

ಹತ್ತು ಹಲವು ಊರುಗಳಲ್ಲಿ ಸಂಚರಿಸಿ ಡೊಳ್ಳಿನ ಕಲೆಯನ್ನು ಪ್ರದರ್ಶಿಸಿದ್ದಾರೆ. ಅವುಗಳೆಂದರೆ ಮಾಲ್ವಿ, ಮೋರಗೇರಿ, ಬೆಟಗೇರಿ, ಗೀರೆನಹಳ್ಳಿ, ನಿಡುಗುರ್ತಿ, ಹಗರಿಬೊಮ್ಮನಹಳ್ಳಿ ಇತ್ಯಾದಿ ಊರುಗಳಲ್ಲಿ ಡೊಳ್ಳಿನ ಕಾರ್ಯಕ್ರಮಗಳನ್ನು ಕೊಟ್ಟುಬಂದಿದ್ದಾರೆ. ಜೊತೆಗೆ ನಮ್ಮ ನಾಡಿನ ಬಹುಮುಖ್ಯವಾದ ಕಲೆ ಡೊಳ್ಳುಕುಣಿತದ ಕಲೆ ಈ ಕಲೆಯಲ್ಲಿ ಪ್ರಸಿದ್ಧಿಪಡೆದು ಹೆಸರುಮಾಡಿದ ಮುದಿಮಲ್ಲಪ್ಪನವರಿಗೆ ಸರ್ಕಾರದ ವತಿಯಿಂದ ಮಾಶಾಸನ ಮಂಜೂರು ಮಾಡಿಸುವಲ್ಲಿ ಹಿರಿಯ ಸಾಹಿತಿಗಳಾದ ಶ್ರೀ ಗುರುಮೂರ್ತಿ ಪೆಂಡಕೂರು ರವರು ಸಹಕಾರ ನೀಡಿದರು.

ನಮ್ಮ ನಾಡಿನ ಮುಖ್ಯವಾದ ಜಾನಪದ ಕಲೆಗಳಲ್ಲಿ ಒಂದಾದ ಈ ಡೊಳ್ಳುಕುಣಿತ ಕಲೆಯನ್ನು ಉಳಿಸಿ - ಬೆಳೆಸಿಕೊಂಡು ಬಂದಿದ್ದರಿಂದ ಮುದಿಮಲ್ಲಪ್ಪನವರಿಗೆ ಸರ್ಕಾರದ ವತಿಯಿಂದ ತಿಂಗಳಿಗೆ ಎರಡುನೂರು ಐವತ್ತು ರೂಪಾಯಿಗಳ ಮಾಶಾಸನವನ್ನು ಇವರ ಕುಟುಂಬಕ್ಕೆ ನೀಡುತ್ತಿದ್ದರು. ಆದರೆ ಅಷ್ಟು ಹಣ ಜೀವನಕ್ಕೆ ಆಗುತ್ತಿರಲಿಲ್ಲ. ಹಲವು ವರ್ಷಗಳು ಕಳೆದ ನಂತರ ಸರ್ಕಾರವು ಕಲಾವಿದರಿಗೆ ನೀಡುತ್ತಿದ್ದ ಮಾಶಾಸವನ್ನು ಹೆಚ್ಚಿಗೆ ಮಾಡಿದರು. ಆದರೂ ಮಾರುಕಟ್ಟೆಯಲ್ಲಿ ದವಸಧಾನ್ಯಗಳ ಬೆಲೆಗಳು ಹೆಚ್ಚಿನ ಧರದಲ್ಲಿ ಮಾರಾಟವಾಗುತ್ತಿದ್ದರಿಂದ ಜೀವನಕ್ಕೆ ಬೇಕಾದ ಕನಿಷ್ಠ ಸೌಲಭ್ಯಗಳು ದೊರೆಯುತ್ತಿರಲಿಲ್ಲ. ಆದ್ದರಿಂದ ಕಲಾವಿದರು ತುಂಬಾ ಕಷ್ಟದಿಂದ ತಮ್ಮ ಜೀವನವನ್ನು ಕಳೆಯುತ್ತಿದ್ದರು. ದಿನ ಕಳೆದಂತೆಲ್ಲಾ ಡೊಳ್ಳಿನ ಕಲೆಯಲ್ಲಿ ಮುದಿಮಲ್ಲಪ್ಪನವರ ಜೀವನದಲ್ಲಿ ಕಂಡು ಅರಿಯದಷ್ಟು ಹೆಸರನ್ನು ಸಂಪಾದಿಸಿದ್ದರು. ಇವರು ಕೇವಲ ಹಳ್ಳಿಗಳಲ್ಲಿ ಮಾತ್ರವಲ್ಲದೆ ಅಕ್ಕ-ಪಕ್ಕದ ರಾಜ್ಯಗಳಿಗೆ ಹಾಗೂ ಹೊರದೇಶಗಳಲ್ಲಿ ತಮ್ಮ ಡೊಳ್ಳುಬಡಿಯುವ ಕಲೆಯನ್ನು ಪ್ರದರ್ಶಿಸಿ ಬಂದಿದ್ದಾರೆ. ಇವರು ದೆಹಲಿಗೆ ಎರಡು ಬಾರಿ ಹೋಗಿಬಂದಿದ್ದಾರೆ. ಅಲ್ಲದೆ ಪಾಂಡಿಚೇರಿ, ತಂಜಾವೂರು, ಪೂನಾ, ಮಧ್ಯಪ್ರದೇಶ, ಭೂಪಾಲ್, ಚೆನ್ನೈ ಮತ್ತು ಮೈಸೂರು, ಬೆಂಗಳೂರು, ಹಂಪಿ ಇತ್ಯಾದಿ ನಾನಾ ನಗರಗಳಲ್ಲಿ ಹಾಗೂ ರಾಜ್ಯದ ವಿವಿಧ ಮೂಲೆಗಳಲ್ಲಿ ಡೊಳ್ಳಿನ ಪ್ರದರ್ಶನ ನೀಡಿದ್ದಾರೆ. ಹಲವಾರು ಪ್ರಶಸ್ತಿಗಳಿಗೆ ಪಾತ್ರರಾಗಿದ್ದಾರೆ. ಹಲವಾರು ತಂಡಗಳಿಗೆ ಡೊಳ್ಳಿನ ತರಬೇತಿ ನೀಡಿದ್ದಾರೆ. ಇವರು ಡೊಳ್ಳಿನ ಕಲೆಗೆ ಸಾಕಷ್ಟು ಸೇವೆ ಸಲ್ಲಿಸಿದ್ದರಿಂದ ಕರ್ನಾಟಕ ರಾಜ್ಯ ಸರ್ಕಾರವು ೨೦೦೧ನೇ ಸಾಲಿನ **ಜಾನಪದ ಶ್ರೀ** ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಸತತ ೮೦ ವರ್ಷಗಳವರೆಗೆ ಡೊಳ್ಳಿನ ಕಲೆಯಲ್ಲಿ ಮುದಿಮಲ್ಲಪ್ಪನವರ ಅವಿರತ ಸೇವೆಗಾಗಿ ಈ ಪುರಸ್ಕಾರಗಳು ಲಭಿಸಿವೆ.

ಮುದಿಮಲ್ಲಪ್ಪನವರು ಇಷ್ಟೆಲ್ಲಾ ಕಷ್ಟಪಟ್ಟು ಜೀವನವನ್ನು ಸಾಗಿಸಿ ಕೊನೆಗೆ ಕಲೆಯನ್ನು ಉಳಿಸಿಕೊಂಡು ಬಂದು ತಮ್ಮ ಎಲ್ಲಾ ಮಕ್ಕಳ ಮದುವೆಯನ್ನು ಮಾಡಿದರು. ಅಲ್ಲದೆ ತಮ್ಮ ಜೀವಿತದ ಅವಧಿಯನ್ನು ಈ ಡೊಳ್ಳು ಬಡಿಯುವ ಕಲೆಗೆ ಮೀಸಲಿಟ್ಟು, ಅವಿರತ ಶ್ರಮದಿಂದ ದುಡಿದಿದ್ದರ ಫಲವಾಗಿ ಅತ್ಯುನ್ನತವಾದ ೨೦೦೧ನೇ ಸಾಲಿನ ಜಾನಪದ ಶ್ರೀ ಪ್ರಶಸ್ತಿಯು ಜೊತೆಗೆ ಒಂದುಲಕ್ಷ ರೂಪಾಯಿ ನಗದು ಒಳಗೊಂಡ ಈ ಪ್ರಶಸ್ತಿಯು ಇವರಿಗೆ ಕೊನೆಗಾಲದಲ್ಲಿ ದೊರೆಯಿತು. ಮುಂದೆ ಈ ಕಲೆಯನ್ನು ಉಳಿಸಿಕೊಂಡು ಹೋಗಲಿಕ್ಕಾಗಿ ತಮ್ಮ ಮಗನಾದ ಶಿವರಾಮಪ್ಪನಿಗೆ ಕಲಿಸಿಕೊಟ್ಟಿದ್ದಾರೆ. ಜೊತೆಗೆ ತನ್ನ ತಮ್ಮನಾದ ಗುಡ್ಡಪ್ಪನು ಸಹ ಅಣ್ಣನಾದ

ಮುದಿಮಲ್ಲಪ್ಪನವರಿಂದ ಈ ಕಲೆಯನ್ನು ಕಲಿತುಗೊಂಡು ಅಣ್ಣನ ಜೊತೆಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ನೀಡಿ ಬಂದಿದ್ದಾರೆ. ಈ ಡೊಳ್ಳುಬಡಿಯುವ ಕಲೆಯು ಇವರ ಮನೆತನದ ಕಲೆಯಾಗಿ ಹರಿದು ಬಂದಿದೆ. ಅಜ್ಜನಿಂದ ಮೊಮ್ಮಗನಿಗೆ ಇದರಿಂದ ಮರಿಮಕ್ಕಳಿಗೆ ಹೀಗೆ ಈ ಕಲೆ ರಕ್ತಗತವಾಗಿ ಹರಿದುಕೊಂಡುಬಂದಿದೆ. ಮುದಿಮಲ್ಲಪ್ಪನವರು ತಮ್ಮ ಜೀವಿತದ ಬಹುಕಾಲವನ್ನು ಡೊಳ್ಳಿನ ಕಲೆಗಾಗಿ ಶ್ರಮಿಸಿ ತಮ್ಮ ೮೫ನೇ ವಯಸ್ಸಿನಲ್ಲಿ ದಿ. ೨೨.೭.೨೦೦೨ರಂದು ಕೊನೆ ಉಸಿರೆಳೆದರು. ಮುಂದೆ ಈ ಡೊಳ್ಳು ಬಡಿಯುವ ಕಲೆಯನ್ನು ಮುದಿಮಲ್ಲಪ್ಪನವರ ತಮ್ಮನಾದ ಗುಡ್ಡಪ್ಪನು ಈ ಕಲೆಯನ್ನು ಇವತ್ತಿಗೂ ಮುಂದುವರೆಸಿದ್ದಾರೆ. ಹಾಗೂ ತಮ್ಮ ಮಗನಾದ ಶಿವರಾಮಪ್ಪನು ಈ ಕಲೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ.

### ೨.೪ ಸಾಮಾಜಿಕ ಜೀವನ

ಮುದಿಮಲ್ಲಪ್ಪನವರು ಸಮಾಜದಲ್ಲಿ ಮೇಲು-ಕೀಳು-ಬಡವ-ಬಲ್ಲಿದ ಎಂಬ ತಾರತಮ್ಯದ ಭಾವನೆಯನ್ನು ಇವರು ಕನಸು ಮನಸ್ಸಿನಲ್ಲೂ ಯೋಚನೆ ಮಾಡದಂತಹ ವ್ಯಕ್ತಿತ್ವವನ್ನು ಹೊಂದಿದ್ದರು. ತಮ್ಮ ಕುಟುಂಬದಲ್ಲಿ ಹಿರಿಯ ವ್ಯಕ್ತಿಯಾದರೂ ತಮ್ಮಂದಿರೊಡನೆ ಪರಸ್ಪರ ಸಹಕಾರದಿಂದ ಬಾಳಿದರು. ಗ್ರಾಮದ ನೆರೆ-ಹೊರೆಯ ಜನರೊಂದಿಗೆ ಪ್ರೀತಿ - ವಿಶ್ವಾಸಗಳ ಆಧಾರದಿಂದ ಜೀವನವನ್ನು ಸಾಗಿಸಿದಂತವರು. ಹಾಗೂ ಅಕ್ಕ-ಪಕ್ಕದ ಊರಿನ ಜನಗಳೊಂದಿಗೆ ಎಂದೂ ಬೇಧ-ಭಾವದಿಂದ ಕಂಡವರಲ್ಲ. ಎಲ್ಲರೂ ಒಂದೇ ಎಂಬ ಮನೋಭಾವವನ್ನು ಹೊಂದಿದ್ದರು. ಯಾವುದೇ ಊರಿನಿಂದ ಡೊಳ್ಳಿನ ಕಾರ್ಯಕ್ರಮಕ್ಕೆ ಆಹ್ವಾನ ಬಂದರೆ ಸಾಕು ಸೌಜನ್ಯದಿಂದ ಸ್ವೀಕರಿಸಿ ಕಾರ್ಯಕ್ರಮಕ್ಕೆ ಹೋಗಿಬರುತ್ತಿದ್ದರು. ಕೆಲವರು ಖುದ್ದಾಗಿ ಬಂದು ಅವರ ಜೊತೆ ಮಾತನಾಡಿ ಕಾರ್ಯಕ್ರಮಕ್ಕೆ ಬರಲು ಭಂಡಾರವನ್ನು ಕೊಟ್ಟುಹೋಗುತ್ತಿದ್ದರು. ಇವರನ್ನು ನೋಡಲು ಬಂದ ವ್ಯಕ್ತಿಗಳನ್ನು ಸೌಹಾರ್ದತೆಯಿಂದ ಬರಮಾಡಿಕೊಂಡು ಅಷ್ಟೇ ಸೌಜನ್ಯದಿಂದ ಅವರೊಂದಿಗೆ ಮಾತನಾಡುತ್ತಿದ್ದರು. ಸಿಟ್ಟು-ಸಿಡುಕಿನ ಸ್ವಭಾವವನ್ನು ಕಂಡವರಲ್ಲ. ಇವರು ಮೃದುವಾದ ಸೃಜನಶೀಲ ಮನಸ್ಸಿನ ಸ್ವಭಾವವನ್ನು ಹೊಂದಿದ್ದರು.

ಮುದಿಮಲ್ಲಪ್ಪನವರು ದೇವರಲ್ಲಿ ಅಪಾರವಾದ ನಂಬಿಕೆಯುಳ್ಳವರಾಗಿದ್ದರು. ಇವರ ಆರಾಧ್ಯದೈವವೆಂದರೆ 'ಸೊನ್ನದ ಸೊಲ್ಲಾಂಬಿಕೆದೇವಿ' ಜೊತೆಗೆ ತಮ್ಮ ಮನೆಯ ದೇವರಾದ 'ಮೈಲಾರಲಿಂಗ'. ದೇವರಿಗೆ ಪೂಜೆ-ಪುನಸ್ಕಾರಗಳನ್ನು ಮಾಡುತ್ತಿದ್ದರು. ಹಾಗೂ ಬೀರಪ್ಪದೇವರನ್ನು ಸಹ ಪೂಜಿಸುತ್ತಿದ್ದರು. ಇವರು ಯಾವುದೇ ಹಳ್ಳಿಗಾಗಲಿ ಅಥವಾ ಪಟ್ಟಣಕ್ಕಾಗಲಿ ಡೊಳ್ಳಿನ ಕಾರ್ಯಕ್ರಮಕ್ಕೆ ಹೊರಡುವಾಗ ಸೊಲ್ಲಮ್ಮದೇವಿಯ ದರ್ಶನವಿಲ್ಲದೆ ಎಂದೂ ಹಾಗೇ ಹೋದವರಲ್ಲ. ಹೆಗಲಿಗೆ ಡೊಳ್ಳನ್ನು ಹಾಕಿಕಂಡು ಸೊಲ್ಲಮ್ಮನ ಗುಡಿಗೆ ಹೋಗಿ ಕೈಮುಗಿದು ನಮಸ್ಕಾರ ಮಾಡಿ, ಹಣೆಗೆ ಭಂಡಾರವನ್ನು ಇಟ್ಟುಕೊಂಡು ನಂತರ ಇವರು ಡೊಳ್ಳಿನ ಕಾರ್ಯಕ್ರಮಕ್ಕೆ ಹೊರಡುತ್ತಿದ್ದರು. ಯಾವುದೇ ಊರಿಗೆ ಹೋಗಲಿ ಇವರನ್ನು ಪ್ರೀತಿಯಿಂದ ಸ್ವಾಗತಿಸುತ್ತಿದ್ದರು. ಹಾಗೂ ಹೋದಲೆಲ್ಲ ಇವರನ್ನು ಗೌರವದಿಂದ ಕಾಣುತ್ತಿದ್ದರು. ಇವರಿಗೆ ಹಲವಾರು

ಪ್ರಶಸ್ತಿಗಳು ಹಾಗೂ ಮೆಚ್ಚುಗೆ ಪತ್ರಗಳು ಬಂದರೂ, ಎಂದೆಂದಿಗೂ ಅಹಂಕಾರದಿಂದ ಮೆರೆದವರಲ್ಲ ಎಲ್ಲಾ ಸೊಲ್ಲಮ್ಮದೇವಿಯ ಅನುಗ್ರಹದಿಂದ ಬಂದಿವೆ ಎನ್ನುತ್ತಾರೆ.

### ೨.೫ ಆರ್ಥಿಕ ಜೀವನ

ಇವರ ಕುಟುಂಬದಲ್ಲಿ ಆರ್ಥಿಕ ಪರಿಸ್ಥಿತಿ ತುಂಬಾ ಜಟಿಲವಾಗಿತ್ತು. ದಿನಾಲು ಹೊಲದಲ್ಲಿ ಬೆಳಿಗ್ಗೆಯಿಂದ ಸಂಜೆಯ ತನಕ ಹೊಲದಲ್ಲಿ ಮೈಮುರಿದು ದುಡಿದು ಬರುತ್ತಿದ್ದರು. ಆಗಿನ ಕಾಲದಲ್ಲಿ ದುಡಿಮೆಗೆ ತಕ್ಕ ಪ್ರತಿಫಲ ಸಿಗುತ್ತಿರಲಿಲ್ಲ. ಹೆಚ್ಚು ಶ್ರಮವಹಿಸಿ ಕೆಲಸಮಾಡಿದರು ಕೂಲಿಮಾತ್ರ ಕಡಿಮೆ ಸಿಗುತ್ತಿತ್ತು. ಜೊತೆಗೆ ಡೊಳ್ಳಿನ ಕಲೆಯನ್ನು ರೂಢಿಸಿಕೊಂಡಿದ್ದರಿಂದ ಹಲವಾರು ಹಳ್ಳಿಗಳಿಗೆ ಡೊಳ್ಳಿನ ಕಾರ್ಯಕ್ರಮವನ್ನು ನೀಡಲು ಹೋಗುತ್ತಿದ್ದರು. ಅಲ್ಲಿಂದ ಅಲ್ಪ - ಸ್ವಲ್ಪ ಕಾಳು - ಕಡಿಗಳನ್ನು ಜೊತೆಗೆ ಪುಡಿಗಾಸನ್ನು ಕೊಟ್ಟುಕಳುಹಿಸುತ್ತಿದ್ದರು. ಇವುಗಳಿಂದ ಬಂದ ಆದಾಯದಿಂದ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ದಿನಕಳೆದಂತೆಲ್ಲಾ ಮುದಿಮಲ್ಲಪ್ಪನವರು ಡೊಳ್ಳು ಬಡಿಯುವ ಕಲೆಯಲ್ಲಿ ಪ್ರಸಿದ್ಧಗೊಂಡಿದ್ದರಿಂದ ತಮ್ಮ ಊರಿನ ಗ್ರಾಮಪಂಚಾಯ್ತಿ ಅಧ್ಯಕ್ಷರು ಮುದಿಮಲ್ಲಪ್ಪನವರಿಗೆ ಸರ್ಕಾರದ ವತಿಯಿಂದ ಮಾಶಾಸನಕ್ಕೆ ಅರ್ಜಿ ಹಾಕಿದರು. ಹಲವು ದಿನಗಳ ನಂತರ ಸರ್ಕಾರವೂ ಡೊಳ್ಳಿನ ಕಲೆಯನ್ನು ನೋಡಿ ಮುದಿಮಲ್ಲಪ್ಪನವರಿಗೆ ಮಾಶಾಸನವು ಮಂಜೂರು ಮಾಡಿತು. ಸರ್ಕಾರದಿಂದ ತಿಂಗಳಿಗೆ ೨೫೦ ರೂ.ಗಳ ಮಾಶಾಸನವನ್ನು ಇವರ ಕುಟುಂಬಕ್ಕೆ ಬರುತ್ತಿತ್ತು. ಹೀಗೆ ಕೊಟ್ಟಂತಹ ಹಣದಿಂದ ಜೀವನ ಸಾಗಿಸುವುದು ತುಂಬಾ ಕಷ್ಟವಾಗುತ್ತಿತ್ತು. ಅಷ್ಟರಲ್ಲಿ ತಮ್ಮ ತುಂಬು ಕುಟುಂಬದ ಜೀವನವನ್ನು ಸಾಗಿಸುತ್ತಿದ್ದರು.

ಸರ್ಕಾರವು ಕಲಾವಿದರಿಗೆ ತಿಂಗಳಿಗೆ ೨೫೦ ರಿಂದ ೫೦೦ ರೂಪಾಯಿಗಳವರೆಗೆ ಸಹಾಯಧನವನ್ನು ನೀಡುತ್ತದೆ. ಆದರೆ ಅದು ಕಲಾವಿದರ ಜೀವನಕ್ಕೆ ಸಾಕಾಗುವುದಿಲ್ಲವೆಂದು ಕಲಾವಿದರು ತಮ್ಮ ಜೀವನಕ್ಕೆ ಆಧಾರವಾಗಲೆಂದು ವ್ಯವಸಾಯ ಮತ್ತು ಕೂಲಿ ಕೆಲಸಗಳನ್ನು ಮಾಡುತ್ತಾ ತಮ್ಮ ಜೀವನವನ್ನು ಸಾಗಿಸುತ್ತಾರೆ. ಹಾಗೂ ಎಷ್ಟೋ ಕಲಾವಿದರು ವಸತಿ ಸೌಲಭ್ಯದಿಂದ ವಂಚಿತರಾಗಿದ್ದಾರೆ. ನಮ್ಮ ಕನ್ನಡ ನಾಡಿನಲ್ಲಿ ಕಲೆಗೆ ತನ್ನದೇ ಆದ ಸಾಂಸ್ಕೃತಿಕವಾಗಿ ಹಾಗೂ ಧಾರ್ಮಿಕವಾಗಿ ತುಂಬಾ ಗೌರವಸ್ಥಾನವಿದೆ. ಅಂಥಹ ಕಲೆಯನ್ನು ಮೈಗೂಡಿಸಿಕೊಂಡು ಕಲೆಯ ಉಳಿವಿಗಾಗಿ ಸಾಕಷ್ಟು ಶ್ರಮಿಸಿಕೊಂಡುಬರುವ ಕಲಾವಿದರಿಗೆ ಸರ್ಕಾರವು ಅಂಥವರನ್ನು ಗುರ್ತಿಸಿ ಅವರ ಜೀವನಕ್ಕೆ ಬೇಕಾದ ಸೌಲಭ್ಯಗಳನ್ನು ಒದಗಿಸಿಕೊಡುವ ಕರ್ತವ್ಯ ಸರ್ಕಾರಕ್ಕೆ ಸೇರಿದ್ದು.

### ೨.೬ ಮುದಿಮಲ್ಲಪ್ಪನವರ ಕೊನೆಯ ದಿನಗಳು

ತಮ್ಮ ಜೀವಿತದ ದಿನಗಳನ್ನು ಹೆಚ್ಚಾಗಿ ಡೊಳ್ಳುಬಡಿಯುವ ಕಲೆಗಾಗಿ ಹತ್ತು ಹಲವು ಹಳ್ಳಿಗಳಿಗೂ ಮತ್ತು ರಾಜ್ಯಕ್ಕೂ, ರಾಷ್ಟ್ರಕ್ಕೂ ಹಾಗೂ ದೇಶ-ವಿದೇಶಗಳಲ್ಲಿ ಹೋಗಿ ತಮ್ಮ ಕಲೆಯ ಪ್ರತಿಭೆಯನ್ನು ಮೆರೆದುಬಂದಿದ್ದಾರೆ. ಹೀಗಾಗಿ ಮುದಿಮಲ್ಲಪ್ಪನವರು ವೃದ್ಧಾಪ್ಯದಲ್ಲಿ ಅನುಭವಿಸಿದ ಕಷ್ಟಗಳು ತುಂಬಾ

ಪರಿಣಾಮಕಾರಿಯಾಗಿವೆ. ಹುಟ್ಟಿನಿಂದ ಬರೀ ಕಷ್ಟಗಳನ್ನೇ ಎದುರು ನೋಡುತ್ತಾ ಬಂದರು ಕೊನೆಗಾಲದಲ್ಲಿ ಸಹ ಕಷ್ಟಗಳ ಸರಮಾಲೆಯಲ್ಲಿ ಅವರು ಮಣ್ಣಾದರು. ಕೊನೆಯಗಾಲದಲ್ಲಿ ಮಕ್ಕಳ ಆಶ್ರಯದೊಂದಿಗೆ ಇರುವ ಜೀವನದ ಅವಧಿಯನ್ನು ಕಳೆಯಬೇಕೆಂಬುದು ಎಲ್ಲಾ ವೃದ್ಧರ ಆಸೆಯಾಗಿರುತ್ತದೆ. ಅದರಂತೆ ಕೊನೆಯಲ್ಲಿ ತಮ್ಮ ಮಕ್ಕಳ ಆಶ್ರಯದ್ದಲಿದ್ದು ಮೊಮ್ಮಕ್ಕಳ ಜೊತೆಯಲ್ಲಿ ಹಾಡಿ-ಕುಣಿದು ಕೆಲವು ದಿನ ಮೊಮ್ಮಕ್ಕಳ ಪ್ರೀತಿ ವಾತ್ಸಲ್ಯದಲ್ಲಿದ್ದರು.

ಆದರೆ ಮುದಿಮಲ್ಲಪ್ಪನವರು ವೃದ್ಧಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲಿದ್ದರು. ವಿಧಿಯ ವಿಪರ್ಯಾಸದಿಂದ ಇವರ ಜೀವನದ ಕೊನೆಯ ಅವಧಿಯಲ್ಲಿ ದೇವರು ಸಹ ಕಣ್ಣು ತೆರೆಯಲಿಲ್ಲ. ಏಕೆಂದರೆ ಹಗಲು-ರಾತ್ರಿಯೆನ್ನದೇ ಹೆಗಲಿಗೆ ಡೊಳ್ಳನ್ನು ಹಾಕಿಕೊಂಡು ಬಡಿಯಲು ನಿಂತರೆ ಸಾಕು. ಇವರಿಗೆ ಸಮಯದ ಪರಿವೆ ಇರುತ್ತಿರಲಿಲ್ಲ. ಹೀಗಾಗಿ ಕೆಲವು ಹಳ್ಳಿಗಳಲ್ಲಿ ಡೊಳ್ಳಿನ ಕಾರ್ಯಕ್ರಮಕ್ಕೆ ಹೋದಾಗ ಅಲ್ಲಿನ ಜನರನ್ನು ಮನರಂಜಿಸಲು ಸ್ಪರ್ಧಾತ್ಮಕವಾಗಿ ನಿಂತುಕೊಂಡು ಕೆಲವು ಬಾರಿ ಸತತ ಮೂರುದಿನಗಳ ಕಾಲ ಹೆಗಲಿಗೆ ಹಾಕಿಕೊಂಡ ಡೊಳ್ಳನ್ನು ತೆಗೆಯುತ್ತಿರಲಿಲ್ಲ. ಹೀಗೆ ನಿರಂತರವಾಗಿ ಡೊಳ್ಳುಬಡಿಯುವ ಕಾಯಕದಲ್ಲಿ ತೊಡಗಿದ ಜೀವ ಕೊನೆಗಾಲದಲ್ಲಾದರೂ ಈ ದೇಹಕ್ಕೆ ವಿಶ್ರಾಂತಿ ದೊರೆಯಲಿಲ್ಲ. ದಿನಗಳು ಕಳೆದಂತೆಲ್ಲ ಇವರು ಅನಾರೋಗ್ಯಕ್ಕೆ ತುತ್ತಾಗುತ್ತಾ ಬಂದರು. ಹಗಲು-ರಾತ್ರಿ ಎನ್ನದೆ ನಿರಂತರವಾಗಿ ಡೊಳ್ಳುಬಡಿಯುತ್ತಿದ್ದ ಪರಿಣಾಮವಾಗಿ ಇವರ ದೇಹದಲ್ಲಿ ರಕ್ತದ ಪರಿಚಲನೆ ಕಡಿಮೆಯಾಗಿ ನರಗಳ ದೌರ್ಬಲ್ಯದಿಂದ ಇವರ ಕಣ್ಣುಗಳು ಕಾಣಿಸುತ್ತಿರಲಿಲ್ಲ. ಮಕ್ಕಳು ತಮ್ಮ ತಂದೆಯನ್ನು ಸಾಕಷ್ಟು ಬಾರಿ ಆಸ್ಪತ್ರೆಯಲ್ಲಿ ತೋರಿಸಿದರು ಪ್ರಯೋಜನವಾಗಲಿಲ್ಲ ಹಾಗೂ ಜೊತೆಗೆ ಸರ್ಕಾರದ ವತಿಯಿಂದ ಇವರ ಅನಾರೋಗ್ಯಕ್ಕೆ ದುಡ್ಡಿನ ಸಹಾಯ ಮಾಡಿದರೂ ಪ್ರಯೋಜನ ವಾಗಲಿಲ್ಲ. ಹೀಗೆ ಕೆಲವು ದಿನಗಳನ್ನು ಕುರುಡಾಗಿ ಕಳೆದರು. ಇಂಥಹ ಪರಿಸ್ಥಿತಿಯಲ್ಲಿ ಮುದಿಮಲ್ಲಪ್ಪನವರಿಗೆ ತಮ್ಮ ಜೀವಿತದ ಕೊನೆಯದಿನಗಳು ಸಹ ಇವರ ಪಾಲಿಗೆ ಮುಳ್ಳಿನ ಹಾಸಿಗೆಯಾಗಿ ಕಾಣಿಸಿಕೊಂಡವು. ಕಣ್ಣುಕಾಣದ ಪರಿಸ್ಥಿತಿಯಲ್ಲಿ ತೊಳಲಾಡುತ್ತಿರುವ ಸಂದರ್ಭದಲ್ಲಿ ಇವರ ದೇಹಕ್ಕೆ ಮಿಂಚಿನ ಸುಳಿಯಂತೆ ಪಾರ್ಶ್ವವಾಯು ಕಾಣಿಸಿಕೊಂಡು ಅವರ ಗಂಟಲನ್ನೆ ನುಂಗಿಕೊಂಡಿತು. ಯಮದೂತನಾಗಿ ಕಾಣಿಸಿಕೊಂಡ ಪಾರ್ಶ್ವವಾಯು ಮುದಿಮಲ್ಲಪ್ಪನವರ ಮಾತುಗಳನ್ನು ನುಂಗಿಹಾಕಿತು. ಇಂಥಹ ಸಮಯದಲ್ಲಿ ಇವರ ಪಾಲಿಗೆ ದೇವರು ಸಹ ಕರುಣೆ ತೋರಲಿಲ್ಲ ಹೀಗೆ ಕೆಲವು ದಿನಗಳು ಮಾತ್ರ ಈ ಜೀವ ಹಿಡಿದುಕೊಂಡು ಕೊನೆಗಾಲದಲ್ಲಿ ಜೀವಂತಶವವಾಗಿ ತಮ್ಮ ಕೊನೆಯ ಕ್ಷಣಗಳನ್ನು ಅನುಭವಿಸಿದರು. ಪಾರ್ಶ್ವವಾಯು ಕಾಣಿಸಿಕೊಂಡಾಗ ತಮ್ಮ ಮಕ್ಕಳು ತಂದೆಯ ಜೀವ ಉಳಿಸಿಕೊಳ್ಳಲಿಕ್ಕೆ 'ಸೊರಟೂರು'ಗೆ ಕರೆದೊಯ್ದರೂ ಪ್ರಯೋಜನವಾಗಲಿಲ್ಲ. ಅವರ ದೇಹದಿಂದ ಪ್ರಾಣಪಕ್ಷಿಯು ಬಹುಬೇಗ ಹಾರಿಹೋಯಿತು.

ಹೀಗೆ ಕಲಾವಿದರು ತಮ್ಮ ಬಾಳಿನ ದೋಣಿಯಲ್ಲಿ ಬರೀ ಕಷ್ಟದ ಮೂಟೆಗಳನ್ನು ಹೊತ್ತುಕೊಂಡು, ಸಮಸ್ಯೆಯೆಂಬ ಸಾಗರದಲ್ಲಿ ಪಯಣ ಮಾಡಿದರು. ಕೊನೆಗಾಲದಲ್ಲಾದರೂ ಈ ಜೀವಕ್ಕೆ ಒಳ್ಳೆಯದನ್ನು ಕಾಣಲಿಲ್ಲ. ಹುಟ್ಟಿನಿಂದ ಸಾಯುವವರೆಗೂ ಬರೀ ಕಷ್ಟ-ನೋವುಗಳನ್ನೇ ಅನುಭವಿಸಿದರೇ ಹೊರತು, ಇವರ

ಬಾಳಿನ ಜೀವನವೆಂಬ ಕೋಶದಲ್ಲಿ 'ಸುಖ'ವೆಂಬ ಪದವನ್ನು ಆ ದೇವರು ಬರೆಯಲಿಲ್ಲ. ಆ ದೇವರು ಇವರ ಜೀವನಕೋಶದ ಕೊನೆಯ ಪುಟದಲ್ಲಿ ಕುರುಡುತನದ ಜೊತೆ ಮೂಕತನವೆಂಬ ಅಕ್ಷರವನ್ನು ಕೆಂಪು ಮಸಿಯಿಂದ ಎದ್ದುಕಾಣುವ ಹಾಗೆ ಬರೆದಿದ್ದನು. ಇದರಿಂದ ಮುದಿಮಲ್ಲಪ್ಪನವರ ಪಾಲಿಗೆ ಆ ದೇವರು ಸಹಿತ ಕ್ರೂರಿಯಾಗಿಯೇ ಕಾಣಿಸಿಕೊಂಡನು.

**ಅಡಿಟಿಪ್ಪಣಿ**

ಈ ಎಲ್ಲಾ ಮಾಹಿತಿಯನ್ನು ಸೊನ್ನದ ದಿ. ಶ್ರೀ ಮುದಿಮಲ್ಲಪ್ಪನರ ಧರ್ಮಪತ್ನಿ ಹೊನ್ನಮ್ಮ, ಗುಡ್ನಪ್ಪ, ಶಿವರಾಮಪ್ಪ, ಹನುಮಂತಪ್ಪ, ಭಾಗ್ಯಮ್ಮ, ದೊಡ್ಡ ನಿಂಗಪ್ಪ ಅವರಿಂದ ಸಂಗ್ರಹಿಸಲಾಗಿದೆ.

೩

# ಡೊಳ್ಳು ಕುಣಿತದ ಪರಂಪರೆ

## ೩.೧ ಡೊಳ್ಳಿನ ಪದ ನಿಷ್ಪತ್ತಿ

### ಕಿಟ್ಟೆಲ್ ರವರ ನಿಘಂಟುವಿನಲ್ಲಿ

ಡೊಳ್ಳು Dollu = (ಟೊಳ್ಳು), ಡೋಳ್, ದೊಳ್ಳು, (ಪೊಳ್ಳು), What is hollow : Hollowness, Te, ಡೊಲ್ಲೆ, ದೊಲ್ಲೆ : Mhr. ಢೊಲು, A Cavity in a [Tree, rock, etc; CF ; a Hollow Pratuberance; a protuberanct] Huga belly (My : Bh ೧, ೧೪, ೨೧; Mhr ಢೊಲು; EF ಡೋಲು ೨) ಡೊಳ್ಳುಗಳ ಹೇರೊಡಲ ವಂಚಕರು (Bp ೫೧, ೫೪) ಎರವು ನೆರಿಯಲ್ಲ, ಬಾವು ಡೊಳ್ಳಲ್ಲ, ನೆರಮನೆ ಅಕ್ಕನ ಗಣ್ಣ ಬಾನವಲ್ಲ. ಅರಮನೆ ಹಣಾಕಟ್ಟೆ, ಅಕ್ಕಸಾಲೆಗೆ ಡೊಳ್ಳು ಬನ್ನು (Prvs) - ಡೊಳ್ಳುಗಣಪತಿ, Ganapati with his huge belly. Seeprv.s. ತಟಗು - ಡೊಳ್ಳುಹೊಟ್ಟೆ. A Hugebelly (My : BP. ೫೯. ೧೧) - ಡೊಳ್ಳು ಹೊಟ್ಟೆಯ ಕೂಚಿ (NBP ೫೬. ೪೨)

### ಕನ್ನಡ ಸಾಹಿತ್ಯ ಕೃತಿಗಳಲ್ಲಿ

ಡೊಳ್ಳಿನ ಉಪಯೋಗವಿದೆ. ರಾಘವಾಂಕನ ಮೆರವಣಿಗೆಯಲ್ಲಿ 'ಡೊಳ್ಳು' ಕೂಡ ಒಂದು ವಾದ್ಯವಾಗಿದ್ದನ್ನು ಕ್ರಿ.ಶ. ೧೫೩೦ರ ಸಿದ್ಧನಂಜೇಶನು ಹೇಳಿದ್ದಾರೆ. (ರಾಘವಾಂಕ ಚರಿತೆ ೪-೬) 'ಹೊಡವ ಡೊಳ್ಳಿನ' ವಿಷಯ ಐರಾವತ ಪುರಾಣದಲ್ಲಿ (ಐರಾವತ ಪುರಾಣ ೪೪) ಉಲ್ಲೇಖಿಗೊಂಡಿದೆ. ಬೇಟೆಗೆ ಹೊರಟಾಗ ಇತರ ವಾದ್ಯಗಳೊಂದಿಗೆ ಡೊಳ್ಳನ್ನು ಬಾರಿಸುತ್ತಿದ್ದರು ಎಂದು ನಂಜುಂಡ ಕವಿ ಹೇಳಿದ್ದಾನೆಂದು (ರಾಚ - ೨೭-೫೧) ಪ್ರಸ್ತಾಪವಿದೆ. ಹಾಗೂ ಕನ್ನಡದಲ್ಲಿ 'ಡೊಳ್ಳು' ಎಂದು ಕರೆಯುತ್ತಾರೆ.

**ಕನ್ನಡ ರತ್ನಕೋಶದಲ್ಲಿ**

ಡೊಳ್ಳು (ನಾ) - ಡೊಳ್ಳು; ಬೊಜ್ಜು; ಒಂದು ಬಗೆಯ ಚರ್ಮವಾದ್ಯ.

**ಜನಪದ ನಿಘಂಟುವಿನಲ್ಲಿ**

ಡೋಳು-ಡೋಲು; ಡೊಳ್ಳು ಒಂದು ಚರ್ಮವಾದ್ಯ. ಹೀಗೆ ಅನೇಕ ಕಡೆ ಪ್ರಸ್ತಾಪವಿದೆ.

## ೩.೨ ಡೊಳ್ಳಿನ ಹುಟ್ಟು ಹಾಗೂ ಬೆಳವಣಿಗೆ

ಆದಿಮಾನವನು ಪ್ರಾಣಿ - ಪಕ್ಷಿ ಮತ್ತು ಪ್ರಕೃತಿಯೊಡನೆ ಸೆಣಸಾಡುತ್ತಾ, ಆಶ್ಚರ್ಯಪಡುತ್ತಾ, ಸಂತೋಷಪಡುತ್ತಾ, ಅನುಕರಣೆ ಮಾಡುತ್ತಾ ಜೀವನ ಸಾಗಿಸಿದನು. ಮನುಷ್ಯನಿಗೆ ಅತ್ಯಂತ ಸಂತೋಷವಾದಾಗ ಕೈಗೆ ಸಿಕ್ಕಿದ್ದನ್ನು ಊದುತ್ತಾ, ಬಾರಿಸುತ್ತಾ ಹೋದಂತೆ ಆ ನಾದಕ್ಕೆ ಮನಸೋತು ಅವುಗಳನ್ನು ಮಾನ್ಯವಾಗಿರಿಸಿಕೊಂಡ. ಇನ್ನು ನಾದಕ್ಕೆ ತಕ್ಕಂತೆ ಕುಣಿತವನ್ನು ಪರಿಷ್ಕರಿಸುತ್ತ ಬಂದನು. ಇಂದು ಲಂಬಾಣಿ ಹಾಡುಗಳಲ್ಲಿ ಗಂಗಾಳ ಬಾರಿಸಲಾಗುತ್ತದೆ. ಬಹುಶಃ ಇದು ಆದಿವಾಸಿ ಕಾಲದ ಪಳಯುಳಿಕೆಯಾಗಿ ಬಂದಿದೆ. ಗಂಗಾಳವನ್ನೋ ಇತರ ಲೋಹದ ವಸ್ತುಗಳನ್ನು ಬಾರಿಸಿದಾಗ ಸುಂದರವಾದ ನಾದ ಹೊರಡುತ್ತದೆಂಬ ತಿಳುವಳಿಕೆಯೇ ಇಂದಿನ ಹಲವಾರು ಬಗೆಯ ವಾದ್ಯ, ತಾಳಗಳಿಗೆ ಜನ್ಮಕೊಟ್ಟಿರಬಹುದು. ಕಾಲಕಳೆದಂತೆ ಅನೇಕ ವಾದ್ಯಗಳು ಹೊಸ ಹೊಸ ರೂಪ ತೊಡುತ್ತವೆ. ಎಲ್ಲೋ ಒಂದು ಮೂಲಸ್ವರೂಪದಲ್ಲೇ ಉಳಿಯುತ್ತದೆ. ಇಂದಿನ ಶಿಷ್ಠ ವಾದ್ಯಗಳಿಗೆಲ್ಲ ಜನಪದ ವಾದ್ಯಗಳೇ ಮೂಲವಾಗಿವೆ.

ಹಳ್ಳಿಗಳಲ್ಲಿ ಹಾಡು-ಕುಣಿತ ಬಯಲಾಟಗಳ ಶೃತಿ-ಲಯಗಳಿಗೆ ಜನಪದ ವಾದ್ಯಗಳು ಆಧಾರವಾಗಿ ನಿಲ್ಲುತ್ತವೆ. ಈ ವಾದ್ಯಗಳು ಹಳ್ಳಿಯ ಸಾಂಸ್ಕೃತಿಕ ಬದುಕಿನ ಅವಿಭಾಜ್ಯ ಅಂಗಗಳು. ಗ್ರಾಮೀಣ ಕಲಾವಿದರು ವಾದ್ಯಗಳನ್ನು ಶಾಸ್ತ್ರೋಕ್ತವಾಗಿ ಕಲಿಯುವುದು ಕಡಿಮೆ. ಅನುಕರಣೆ, ಅನುಭವಗಳಿಂದ ವಾದ್ಯಗಳ ಕಲೆಗಾರಿಕೆ ಇವರಿಗೆ ಕರಗತವಾಗುತ್ತದೆ. ಹಬ್ಬ-ಹುಣ್ಣಿಮೆ, ಜಾತ್ರೆ-ಉತ್ಸವಗಳಲ್ಲಿ ಕಲಾಪ್ರದರ್ಶನಕ್ಕೆ ಮುಕ್ತ ಅವಕಾಶವಿರುವುದರಿಂದ ಈ ಸಂದರ್ಭಗಳೇ ಕಲಿಯಲು ಪ್ರೇರಣೆಯಾಗುತ್ತವೆ. ಕಲೆಗೆ ಜಾತಿ ಭೇದವಿಲ್ಲ. ಯಾರು ಬೇಕಾದರೂ ತಮಗೆ ಇಷ್ಟವೆನಿಸಿದ ಕಲೆಯನ್ನು ಕರಗತ ಮಾಡಿಕೊಳ್ಳಬಹುದು. ಹಳ್ಳಿಗಳಲ್ಲಿ ವರ್ಷವೀಡಿ ನಡೆಯುವ ಜಾತ್ರೆ-ಉತ್ಸವಗಳಲ್ಲಿ ವಿಜೃಂಭಿಸುವುದೇ ವಾದ್ಯಗಳಿಂದ. ವಾದ್ಯ ಪರಿಕರಗಳಲ್ಲ ಕೌಟುಂಬಿಕ ಮಟ್ಟದ ಅನೇಕ ಸಂಪ್ರದಾಯ, ಆಚರಣೆಗಳಿಗೆ ಸಾಮಾಜಿಕ ಮಟ್ಟದ ಉತ್ಸವಗಳಿಗೆ ಪೂರ್ಣತೆಯೆಂಬುದಿಲ್ಲ. ಹಲಗಿ ಮಜಲು, ಕರಡಿಮಜಲು, ಡೊಳ್ಳಿನಮಜಲು, ಸನಾದಿ, ಔಡಿಕೆ, ಗೀಗೀ ಮುಂತಾದ ಮೇಳಗಳ ರೀತಿ-ಸಂದರ್ಭ ಗಳನ್ನು ನೋಡಿದರೆ ಹಳ್ಳಿಯ ಬದುಕಿನಲ್ಲಿ ಗಾಢವಾಗಿ ಬೆರೆತುಹೋಗಿರುವುದು ಅರ್ಥಪೂರ್ಣ ವೆನಿಸುತ್ತದೆ.

ಡೊಳ್ಳು ಕುರುಬರ ವಿಶೇಷ ವಾದ್ಯ. ಈ ವಾದ್ಯ ಮೊದಲಿನಿಂದಲೂ ಅವನ ಕೈಯಲ್ಲಿದ್ದಂತೆ ಕಾಣುತ್ತದೆ. ಗುಡ್ಡಗಾಡಿನಲ್ಲಿ ಕುರಿಕಾಯುವಾಗ ಅವನಿಗೆ ಈ ವಾದ್ಯದ ಅವಶ್ಯಕತೆ ಉಂಟಾಗಿರಬೇಕು. ಹಿಂಸಾ ಪಶುಗಳು ಕುರಿಗಳನ್ನು ಹಿಡಿದು ತಿನ್ನುತ್ತವೆ. ಜಪ್ಪಿಸಿ ಕುಳಿತು ಕುರಿಗಳನ್ನು ಬೇಟೆಯಾಡುತ್ತವೆ. ಸಪ್ಪಳ ಕೇಳಿದರೆ ಸಮೀಪಕ್ಕೆ

ಹಾಯುವುದಿಲ್ಲ. ಆದ್ದರಿಂದ ಕರುಬರು ಡೊಳ್ಳು ಬಾರಿಸುತ್ತ ಸದ್ದು ಹುಟ್ಟಿಸುತ್ತಾ ಕುರಿಗಳನ್ನು ಕಾದಿರಬೇಕು. ಡೊಳ್ಳು ಅವನ ಕೊರಳಲ್ಲಿ ಸದಾ ತೂಗಾಡುತ್ತಿರಬೇಕು.

"ಕುರಿಯ ಮೇಲೆ ಕಣ್ಣಿರಲೆಪ್ಪಾ
ಡೊಳ್ಳಿನ ಮೇಲೆ ಒಂದು ಕೈಯಿರಲಿ"

ಎಂದು ಕುರುಬರು ಹಾಡುವಲ್ಲಿ ಈ ಮಾತಿನ ಅರ್ಥವನ್ನು ಅರಿಯಬಹುದು. ಕುರಿಹಿಂಡು ಮೆಯ್ದು ಮಲಗಿದಾಗ ತನಗೆ ಆನಂದವಾಗುವಂತೆ ಕುಣಿಕುಣಿದು ಹೆಜ್ಜೆಹಾಕಿ ಡೊಳ್ಳು ನುಡಿಸಿರಬೇಕು. ಪ್ರಸಂಗಾನುಸಾರವಾಗಿ ಹಬ್ಬ-ಹುಣ್ಣಿಮೆ-ಜಾತ್ರೆ-ಉತ್ಸವ ಸಮಯಗಳಲ್ಲಿ ಸಾಮೂಹಿಕವಾಗಿ ತಾಳ ತಪ್ಪದಂತೆ ಈ ಡೊಳ್ಳನ್ನು ಹಾಕಿಕೊಂಡು ಕುಣಿದಾಡಿರಬೇಕು. ಅಂದೇ ಡೊಳ್ಳು ನುಡಿಸುವ ಕಲೆ-ಉಗಮ ಹೊಂದಿರಬೇಕೆನ್ನಿಸುತ್ತದೆ. ಕಾಲಾಂತರದಲ್ಲಿ ಈ ಕಲೆ ಹಾಲುಮತದ ಕುರುಬ ಜನಾಂಗದ ಸಾಂಸ್ಕೃತಿಕ ಜೀವನದೊಂದಿಗೆ ಸಮರಸವಾಗಿ ಬೆರೆತುಕೊಂಡು, ಹಳ್ಳಿಗರ ಸಾರ್ವಜನಿಕ ಹಬ್ಬ-ಜಾತ್ರೆ-ಉತ್ಸವ ಮೊದಲಾದ ಧಾರ್ಮಿಕ ಆಚರಣೆಗಳಲ್ಲಿ ವಿಶೇಷವಾಗಿ ಬಳಕೆಯಾಗುತ್ತದೆ. ಈ ಕಲೆಯಲ್ಲಿ ಜಾಣತನ ಅಡಗಿದೆ. ಆವೇಶ ತುಂಬಿದೆ. ಕಲಾತ್ಮಕವಾಗಿ ಬಾರಿಸುವ ಡೊಳ್ಳಿನ ಗತಿ, ನಾದದಲ್ಲಿ ಇಹಲೋಕವನ್ನೇ ಮರೆಸಿ ದೈವದ ಕಡೆ ಚಿತ್ತವನ್ನು ಹರಿಸುವ ಮೋಡಿ ಇದೆ. ಆದ್ದರಿಂದ ಈ ಕಲೆ ಇಂದಿನವರೆಗೂ ನಿರಂತರವಾಗಿ ಬೆಳೆದುಬಂದುದರಲ್ಲಿ ಆಶ್ಚರ್ಯವೇನೂ ಇಲ್ಲ.

ಉತ್ಸವ-ಸಮಾರಂಭಗಳಲ್ಲಿ ಡೊಳ್ಳುಬಾರಿಸಿ ಕುಣಿಯುವ ಕುರುಬರು ಇಂದು ಹಳ್ಳಿಹಳ್ಳಿಗಳಲ್ಲಿ ಕಂಡುಬರುತ್ತಾರೆ. ಬೀರದೇವರ ಉತ್ಸವದಲ್ಲಿ ಪಾಲ್ಗೊಳ್ಳುವ ಈ ಕುರುಬರು ಡೊಳ್ಳು ಬಾರಿಸುವುದನ್ನು ಈಗಲೂ ಕಾಣುತ್ತೇವೆ. ಕಾಲಲ್ಲಿ ಗೆಜ್ಜೆಕಟ್ಟಿ, ಸೊಂಟಕ್ಕೆ ಡೊಳ್ಳು ಬಿಗಿದು, ಹೆಗಲಮೇಲೆ ಕಂಬಳಿ ಹಾಕಿ ಎಡಗೈ-ಬಲಗೈಗಳಿಂದ ಪೆಟ್ಟುಹಾಕುವುದನ್ನು ಕಂಡಾಗ ಮೈಯಲ್ಲಿ ರೋಮಾಂಚನ ಏಳುವುದು. ಒಬ್ಬನೊಡನೆ-ಇನ್ನೊಬ್ಬ, ಇನ್ನೊಬ್ಬನೊಡನೆ ಮತ್ತೊಬ್ಬ ಹೀಗೆ ನಾಲ್ಕೈದು ಜನಸೇರಿ ಸಾಮೂಹಿಕವಾಗಿ ಡೊಳ್ಳು ಬಾರಿಸುವರು. ಇವರಿಗೆ ನಾಯಕನೊಬ್ಬನ್ನುಂಟು. ಆತ ಇವರಿಗೆ ತಾಳ-ಪಟ್ಟನ್ನು ತೋರಿಸುತ್ತಾ ಡೊಳ್ಳುಗಾರರಿಗೆ ಹುರುಪು ನೀಡುತ್ತಾನೆ. ಎಲ್ಲರೂ ಒಬ್ಬನಿಗಿಂತ ಒಬ್ಬರು ಮಿಗಿಲಾಗಿ ಕೈಯಲ್ಲಿರುವ ಗುಣಿಯಿಂದ ಡೊಳ್ಳು ಬಾರಿಸುವರು. ಆ ನಾದಕ್ಕೆ ಕೇಳುವವರ ಕಿವಿ ಗಡಚಿಕ್ಕುತ್ತವೆ. ಭೂಮಿ ಬಿರಿದಂತಾಗುತ್ತದೆ. ಆಕಾಶ ಅದುರಿದಂತಾಗುತ್ತದೆ. ಮರದ ಕಟ್ಟಿಗೆಯಿಂದ ತಯಾರಿಸಿದ ದೊಡ್ಡ ಡೊಳ್ಳುಗಳನ್ನು ಹೆಗಲಿಗೆ ತೂಗುಹಾಕಿಕೊಂಡು ಕುಣಿಯುವ ಅವರ ರಭಸವನ್ನು ನೋಡಿದರೆ ಅವರು ಎಷ್ಟು ಗಟ್ಟಿಗರಪ್ಪ ಎಂದು ಮನಸ್ಸು ಹೇಳದೇ ಇರದು. ಕುರುಬರು ಬರಿ ಡೊಳ್ಳು ಬಾರಿಸುವುದಿಲ್ಲ. ಬಾರಿಸುತ್ತಲೇ ಅವರು ಕುಣಿಯುತ್ತಾರೆ. ಡೊಳ್ಳಿನ ನುಡಿತಕ್ಕು ಅವರ ಕುಣಿತದ ಹೆಜ್ಜೆಗೂ ತಾಳ-ಮೇಳ ಹೆಚ್ಚು ಪ್ರತಿಯೊಬ್ಬ ಡೊಳ್ಳುಗಾರ ಬಲಗಾಲು ಕಿತ್ತು ಇಡುತ್ತಲೇ ಮುಂದೆ ಜಿಗಿಯುತ್ತಾನೆ. ಎಡಗಾಲು ಹಾರಿಸಿ ತನ್ನ ಮೈಸುತ್ತ ಹೊರಳುತ್ತಾನೆ. ಹೀಗೆ ಪ್ರತಿಯೊಬ್ಬರೂ ಬಾರಿಸುತ್ತ ಕುಣಿಯುತ್ತ ಚಕ್ರಾಕಾರವಾಗಿ ತಿರುಗುವರು. ಹಿರಿಯ ಡೊಳ್ಳುಗಾರ ಮುರಿತ ಕೊಟ್ಟಾಗ ಟಗರಿನಂತೆ ಒಬ್ಬರಿಗೊಬ್ಬರು ಎದುರು-ಬದರು ನಿಂತು ಹುರಿದುಂಬಿ ಜಿಗಿಜಿಗಿದು ಡೊಳ್ಳು ಬಡಿಯುವರು. ಬಡಿಯುದರಲ್ಲಿಯೂ ಹಲವಾರು

ಗತ್ತುಗಳಿವೆ. ಗತ್ತಿಗೆ ಅನುಗುಣವಾಗಿ ಡೊಳ್ಳಿನ ಕುಣಿತದಲ್ಲಿಯೂ ಹಲವಾರು ಬಗೆಗಳಿವೆ. ಅವುಗಳ ರೀತಿ ನೀತಿಗಳನ್ನು ಕಂಡು ಅರಿಯಬೇಕು; ಅರಿತು ಆನಂದಪಡಬೇಕು.

ಕರ್ನಾಟಕದ ಬಳ್ಳಾರಿ, ಬಿಜಾಪುರ, ಬೆಳಗಾಂ, ಗುಲ್ಬರ್ಗಾ, ರಾಯಚೂರು, ಚಿಕ್ಕಮಂಗಳೂರು, ಧಾರವಾಡ, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳಲ್ಲಿ ಡೊಳ್ಳುಕುಣಿತ ಪ್ರಚಲಿತವಾಗಿದೆ. ಉತ್ತರ ಕರ್ನಾಟಕದ ಕಲೆಗಳಲ್ಲಿಯೇ ಅತಿ ಪ್ರಸಿದ್ಧವಾಗಿರುವ ಈ ಡೊಳ್ಳು ಕುಣಿತದ ಕಲೆ ತನ್ನದೇ ವೈಶಿಷ್ಟ್ಯತೆಯ ವಿಶೇಷವನ್ನು ಉಳಿಸಿಕೊಂಡು ಬೆಳೆದಿದೆ.

ಡೊಳ್ಳಗೆ ಸಂಬಂಧಿಸಿದಂತೆ ಕುರುಬರಲ್ಲಿ ಕೆಲವೊಂದು ಪುರಾಣಗಳಿವೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಪುರಾಣ ೧**

ಹಿಂದೆ ಡೊಳ್ಳುಸುರನೆಂಬ ರಾಕ್ಷಸನಿದ್ದ. ಆತ ಪರಮಾತ್ಮನನ್ನು ಒಲಿಸಿಕೊಳ್ಳಲು ಸೂಜಿಯ ಮೇಲೆ ನಿಂತು ತಪ್ಪಸ್ಸನ್ನಾಚರಿಸಿದ. ಒಂದು ದಿನ ದೇವರು ಅವನಿಗೆ ಪ್ರತ್ಯಕ್ಷವಾಗಿ ವರ ಕೇಳುವಂತೆ ಹೇಳಿದ. ಆಗ ಡೊಳ್ಳಾಸುರನು 'ನಿನ್ನನ್ನೇ ನುಂಗಬೇಕೆಂದು' ವರ ಕೇಳಿದನು. ಶಿವ ತಥಾಸ್ತು ಎಂದಾಗ ಡೊಳ್ಳಾಸುರನು ಶಿವನನ್ನೇ ನುಂಗಿಬಿಟ್ಟನು. ಆಗ ಮೂರುಲೋಕವು ಪ್ರಳಯವಾಯಿತು. ದೇವಾನುದೇವತೆಗಳು ಬೊಬ್ಬಿಟ್ಟರು. ಶಿವನು ಆ ರಾಕ್ಷಸನ ಹೊಟ್ಟೆಯಲ್ಲಿಯೇ ಬೆಳೆಯತೊಡಗಿದನು. ಭಾರ ತಡೆಯಲಾರದ ಆತ 'ನೀನು ಹೊರಗೆ ಬಾ' ಎಂದು ಹೇಳಲಾಗಿ ಶಿವ ಆತನ ಹೊಟ್ಟೆಯನ್ನು ಸೀಳಿ ಹೊರಬಂದನು. ಆ ಮೇಲೆ ಆತನ ಡಿಂಬವನ್ನು ಡೊಳ್ಳು ಮಾಡಿದ, ಚರ್ಮಸುಲಿದು ಅದರ ಇಬ್ಬದಿಗಳಿಗೆ ಬಿಗಿದ, ಕರುಳಿನಿಂದ ಹಗ್ಗ ಬಿಗಿದ, ಕೈಗಳನ್ನು ಗುಣಿ ಮಾಡಿದ ಆಮೇಲೆ ಅದನ್ನು ಹಾಲುಮತದ ಕುರುಬನಿಗೆ ದಾನ ಮಾಡಿದ.

**ಪುರಾಣ ೨**

ಡೊಳ್ಳುಸುರನೆಂಬ ರಾಕ್ಷಸನೊಬ್ಬನಿದ್ದ. ಈತನನ್ನು ಜೊಳ್ಳಾಸುರನೆಂತಲೂ ಕರೆಯಲಾಗುತ್ತಿದೆ. ಆತ ಲೋಕದಲ್ಲಿ ತಾನೊಬ್ಬನೇ ಶ್ರೇಷ್ಠನಾಗಬೇಕೆಂಬ ಇಚ್ಛೆಯಿಂದ ಈಶ್ವರನ್ನು ಕುರಿತು ತಪಸ್ಸು ಮಾಡಿದ. ಈಶ್ವರನು ಪ್ರತ್ಯಕ್ಷನಾಗಿ ವರ ಬೇಡುವಂತೆ ಕೇಳಲು 'ನಿನ್ನನ್ನೇ ನುಂಗುವಂತೆ' ವರಕೊಡು ಎಂದನು. ಆಗ ಶಿವನು ಅದಕ್ಕೊಪ್ಪಿ "ನನ್ನನ್ನು ಮತ್ತೆ ನೀನು ಎಂದು ಬಿಡುವುದು" ಎಂದು ಕೇಳಿದನು. ಆಗ ರಾಕ್ಷಸನು ನಿನ್ನನ್ನು ಪಂಚರಾತ್ರಿಗಳು ಒಂದುಗೂಡಿದಂದು ಬಿಡುತ್ತೇನೆಂದನು. (ಕಾಮ, ಕ್ರೋಧ, ಮೋಹ, ಮದ, ಮತ್ಸರಗಳು ಪಂಚರಾತ್ರಿಯ ಪ್ರತೀಕ) ಈ ಮಾತಿನ ಮೇರೆಗೆ ಡೊಳ್ಳಾಸುರನು ಈಶ್ವರನನ್ನು ನುಂಗಿದನು. ಇತ್ತ ಡೊಳ್ಳಾಸುರನ ಹೊಟ್ಟೆಯಲ್ಲಿದ್ದ ಶಿವನು ಒಂದು ದಿನ ಪಂಚರಾತ್ರಿಗಳು ಒಂದುಗೂಡುವಂತೆ ಮಾಡಿದನು. ಆದರೆ ಡೊಳ್ಳಾಸುರನು ಶಿವನನ್ನು ಬಿಡಲೇ ಇಲ್ಲ. ಇತ್ತ ಪಾರ್ವತಿಯು ಹೆದರಿ ಗಣಪತಿಯನ್ನು ಶಿವನನ್ನು ಹುಡುಕಲು ಹಳುಹಿಸುವಳು ಆದರೆ ಗಣಪತಿಯು ಶಿವನ ಭಯಂಕರ ರೂಪನೋಡಿ ಹೆದರಿ ಶಿವನನ್ನು ಧ್ಯಾನಿಸಿದನು. ಆಗ ಶಿವನು ಡೊಳ್ಳಾಸುರನ

ಹೊಟ್ಟೆಯಲ್ಲಿಯೇ ಬೆಳೆಯುವನು. ಹೀಗೆ ಬೆಳೆಯುತ್ತಿರಲಾಗಿ ಡೊಳ್ಳಸುರನ ಹೊಟ್ಟೆಯು ಸೀಳಿ ಹೋಗುತ್ತದೆ. ಶಿವನು ಈ ಅಸುರನ ಡೊಕ್ಕೆಯಿಂದ ಪಡಗ (ಡೊಳ್ಳು) ಮಾಡಿದನು, ಚರ್ಮ ತೆಗೆದು ಪಡಗಕ್ಕೆ ಮುಚ್ಚಿದ, ಕರುಳು ತೆಗೆದು ಹಗ್ಗ ಮಾಡಿದ, ರಾಕ್ಷಸನ ಕೋರೆಯನ್ನು ಮುರಿದು ಡೊಳ್ಳಿನ ಗುಣಿಯನ್ನು ಮಾಡಿದ, ಆತನ ಅಂಗೈಯನ್ನು ಕಡಿದು ತಾಳವನ್ನು ಮಾಡಿದ, ಆಮೇಲೆ ಇದರಿಂದ ಬರುವ ಅದ್ಭುತ ನಾದದಿಂದ ತಾನೇ ಬೆರಗಾದನು. ಆಮೇಲೆ ಶಿವನು ಭೂಮಿಯಲ್ಲಿ ಕುರುಬರ ಕುಲವನ್ನು ನಿರ್ಮಿಸಿ, ಅವರಿಗೆ ಡೊಳ್ಳನ್ನಿತ್ತನು. ಡೊಳ್ಳನ್ನು ಅವರ ಕೈಗೆ ಕೊಡುವಾಗ ಶಿವ ಹೀಗೆಂದು ಎಚ್ಚರಿಸಿದ ''ಕೆಟ್ಟಕಾರ್ಯಕ್ಕೆ ಡೊಳ್ಳನ್ನು ಬಡಿದರೆ ನಾಶವಾಗಿ ಹೋಗುತ್ತೀರಿ. ಒಳ್ಳೆಯ ಕಾರ್ಯಕ್ಕೆ ಮಾತ್ರ ಡೊಳ್ಳು ಬಾರಿಸಿರಿ'' ಎಂದು ಹೇಳಿದನಂತೆ.

**ಪುರಾಣ ೩**

ಒಂದಾನೊಂದು ದಿನ ಪಾರ್ವತಿ ಮತ್ತು ಪರಶಿವ ಜೂಜಾಡುತ್ತಿದ್ದರು. ಸೋತವರು ತಮ್ಮ ಸರ್ವಸ್ವವನ್ನು ಬಿಟ್ಟು ಕೈಲಾಸ ತೊರೆದು ಯಾರಿಗೂ ಕಾಣದಂತೆ ಜೀವಿಸಬೇಕೆಂದೂ ಪಣ ಕಟ್ಟಿಕೊಂಡರು. ಅದರಂತೆ ಶಿವ ಸೋತ, ಪಣದಂತೆ ಭೂಲೋಕಕ್ಕೆ ಬಂದ ಶಿವ ಒಂದು ಕಲ್ಲುಗವಿಯಲ್ಲಿ ಕಲ್ಲಾಗಿ ಬಿದ್ದಿದ್ದ. ಇತ್ತ ಶಿವನು ಕಲ್ಲಾಗಿ ಬಿದ್ದಿದ್ದ ಜಾಗದಲ್ಲಿ ಮಾಯಾಮೂರ್ತಿಯು ಮಾಯಾರೂಪದಿಂದ ಕಾಯುತ್ತಿದ್ದ. ಹೀಗೆ ಬಹಳ ಸಮಯ ಕಳೆದವು. ಶಿವನಿಲ್ಲದೆ ಜಗತ್ತಿಗೆ ಜಗತ್ತೇ ಗೊಳಾಡಿತು. ಪಾರ್ವತಿಗೆ ಲೋಕಪಾಲನೆಯನ್ನು ಮಾಡುವುದು ಸಾಕಾಗಿ ಹೋಯಿತು. ಅನಂತರ ನಾರದನು ಶಿವನನ್ನು ಪತ್ತೆ ಮಾಡಿದ. ಶಿವನಿಗೆ ಕಾವಲಿದ್ದ ಮಾಯಮೂರ್ತಿಯನ್ನು ಕೊಂದನು. ಆಗ ತನಗೆ ಕಾವಲಿದ್ದ ಮಾಯಾಮೂರ್ತಿಯನ್ನು ಬಿಟ್ಟುಬರಲಾಗದೇ ಶಿವನು ಅವನ ಕಳೇಬರದಿಂದ ಡೊಳ್ಳನ್ನು ಮಾಡಿದ. ನಾರದ ಈ ಡೊಳ್ಳನ್ನು ಬಾರಿಸುತ್ತ ''ದೇವಿಯೇ ನಿಮ್ಮಯ ದೇವರು ಬಂದಾನ ಬನ್ನಿರೆ'' ಎಂದು ಪಾರ್ವತಿಯನ್ನು ಕರೆದನು. ಆಗ ಪಾರ್ವತಿ ''ಸ್ವಾಮಿ ನಮ್ಮಯ ದೇವರು ಬಂದಾನ ಬನ್ನಿರೆ'' ಎಂದು ಸಖಿಯರೊಂದಿಗೆ ಸಂಭ್ರಮದಿಂದ ಗಂಡನನ್ನು ಸ್ವಾಗತಿಸಿದಳು. ಹೀಗೆ ಡೊಳ್ಳಿನ ಪದಗಳು ಈಗಲೂ ''ಸ್ವಾಮಿ ನಮ್ಮಯ ದೇವರು ಬಂದಾನ ಬನ್ನಿರೆ'' ಎಂಬ ಪಲ್ಲವಿಯಿಂದ ಆರಂಭವಾಗುತ್ತದೆ ಎಂದು ಜನ ನಂಬುತ್ತಾರೆ.

ಎಂದಿನಿಂದಲೂ ಕನ್ನಡ ನಾಡಿನಲ್ಲಿ ಡೊಳ್ಳಿನ ಉಪಯೋಗವಿದೆ. ರಾಘವಾಂಕನ ಮೆರವಣಿಗೆಯಲ್ಲಿ 'ಡೊಳ್ಳು' ಕೂಡ ಒಂದು ವಾದ್ಯವಾಗಿದ್ದುದನ್ನು ಸಿದ್ಧನಂಜೇಶನು ಹೇಳಿದ್ದಾನೆ. (ರಾಘವಾಂಕ ಚರಿತೆ ೪ - ೬) ಹೊಡೆವ ಡೊಳ್ಳಿನ ವಿಷಯ ಐರಾವತ ಪುರಾಣದಲ್ಲಿ ಉಲ್ಲೇಖ (ಐರಾವತ ಪುರಾಣ ೪೪) ಬೇಟೆಗೆ ಹೊರಟಾಗ ಇತರ ವಾದ್ಯಗಳೊಂದಿಗೆ ಡೊಳ್ಳನ್ನು ಬಾರಿಸುತ್ತಿದ್ದುದನ್ನು ನಂಜುಂಡು ಕವಿ ಹೇಳಿ (ಕ್ರಿ.ಶ. ೧೫೨೫ ಕಾಲ ಕವಿ) ದ್ದಾನೆ. ಇನ್ನು ಅನೇಕ ಕಡೆ ಡೊಳ್ಳಿನ ಪ್ರಸ್ತಾಪವಿದೆ.

### ೩.೩ ಡೊಳ್ಳಿನ ರಚನೆ

ಡೊಳ್ಳು ದೊಡ್ಡ ಗಾತ್ರದ ಚರ್ಮವಾದ್ಯಗಳಲ್ಲೊಂದು. ಈ ವಾದ್ಯಕ್ಕೆ ಒಂದೂವರೆ ಇಲ್ಲವೆ ಎರಡು ಅಡಿ ವ್ಯಾಸವುಳ್ಳ ಹೊನ್ನಿನ-ಬೇವಿನ ಮರದ ಕಟ್ಟಿಗೆಯನ್ನು ತಂದು, ನುರಿತ ಬಡಿಗೆಗಾರರಿಂದ ಸಿಲೆಂಡಿರಿನ ಆಕಾರದಲ್ಲಿ ಒಳಗೆ ಪೊಳ್ಳು ಇರುವಂತೆ ಕೆತ್ತಿಸಿಕೊಂಡು ಬರುತ್ತಾರೆ. ಇದನ್ನು 'ಡೊಳ್ಳಿನ ಪಡಗ' ಎಂದು ಕರೆಯಲಾಗುತ್ತದೆ. ಈ ಪಡಗಕ್ಕೆ ಹೋತಿನ ಮತ್ತು ಆಡಿನ ಚರ್ಮ ತಂದು, ಒಂದೆರಡು ದಿನಗಳವರೆಗೂ ನೀರಿನಲ್ಲಿ ಚೆನ್ನಾಗಿ ನೆನೆಹಾಕಿ ಚರ್ಮದ ಮೇಲಿನ ಕೂದಲನ್ನು ಗ್ಲಾಸಿ (ಗಾಜು)ನಿಂದ ಚೆನ್ನಾಗಿ ಉಜ್ಜುತ್ತಾರೆ. ನಂತರ ಆ ಚರ್ಮವನ್ನು ನೆರಳಿನಲ್ಲೇ ಏಳರಿಂದ ಎಂಟು ದಿನಗಳವರೆಗೆ ಒಣಗಿಸುತ್ತಾರೆ. ಒಣಗಿದ ಚರ್ಮವನ್ನು ತೆಗೆದುಕೊಂಡು ಪಡಗದ ಬಲಭಾಗಕ್ಕೆ ಹೋತಿನ ಚರ್ಮವನ್ನು; ಎಡಭಾಗಕ್ಕೆ ಆಡಿನ ಚರ್ಮವನ್ನು ಹಾಕಿ ಕುರುಬರೇ ಬಿಗಿಯುತ್ತಾರೆ. ಡೊಳ್ಳಿನ ಬಲಭಾಗಕ್ಕೆ ಬಾಳೆ ಎಲೆಯ ಬೂದಿಯಿಂದ ಎಣ್ಣೆಯಲ್ಲಿ ತಯಾರಿಸಿದ ಜಿಗಿ ಇಲ್ಲವೆ ಔಡಲಬೀಜ ಅರೆದು ಎಣ್ಣೆಯ ಗಸಿಯೊಡನೆ ಬೆರಸಿದ ವಸ್ತುವನ್ನು ಲೇಪಿಸುತ್ತಾರೆ. ಇದರಿಂದಾಗಿ ಕಪ್ಪಾಗಿ ಕಾಣುವ ಆ ಭಾಗವನ್ನು ಕಟ್ಟಿಗೆಯ ಗುಣಿಯಿಂದ ಬಾರಿಸಿದಾಗ ಬಹು ಗಡುಸಾದ ನಾದ ಹೊರಡುತ್ತದೆ. ಗುಣಿಗೆ ಬೇವಿನ ಕಟ್ಟಿಗೆಯನ್ನು ಬಳಸುತ್ತಾರೆ. ಎಡಭಾಗವನ್ನು ಎಡಗೈಯಿಂದ ಬಾರಿಸುತ್ತಾರೆ. ಬಾರಿಸುವಾಗ ನಾದ ಹೆಚ್ಚುಕಡಿಮೆ ಬಾರದಂತೆ ಮತ್ತು ಎಷ್ಟು ಜೋರಾಗಿ ಬಡಿದರೂ ಕಿತ್ತುಹೋಗದಂತೆ ಚರ್ಮಕ್ಕೆ ತೂತುಹಾಕಿ ನೂಲಿನಿಂದ ಗಟ್ಟಿಯಾಗಿ ಬಿಗಿದಿರುತ್ತಾರೆ. ಎರಡು ಕಡೆ ಹೆಬ್ಬೆಟ್ಟಿನಳತೆಯ ಕಟ್ಟಿಗೆಯ ತುಂಡುಗಳನ್ನು ಸೇರಿಸಿದ್ದರಿಂದ ಬಿಗಿತ ಇನ್ನಷ್ಟು ಹೆಚ್ಚುತ್ತದೆ. ಡೊಳ್ಳು ಬಾರಿಸಬೇಕೆಂದಾಗ ನೂಲನ್ನು ಜಗ್ಗಿ ಬಿಗಿಯುವ ಮತ್ತು ಬಾರಿಸುವುದು ಮುಗಿದ ನಂತರ ಇಳಿಸುವ ವ್ಯವಸ್ಥೆಯಲ್ಲಿ ಬಿಗಿದಿರುತ್ತಾರೆ. ಡೊಳ್ಳು ಒಂದೂವರೆಯಿಂದ ಎರಡು ಅಡಿಯವರೆಗೆ ಮತ್ತು ವ್ಯಾಸದಲ್ಲಿ ೧೮ ರಿಂದ ೨೪ ಅಂಗಲುದವರೆಗೆ ಇರುವುದರಿಂದ ಆಕಾರಕ್ಕೆ ತಕ್ಕಂತೆ ನಾದವನ್ನು ಹುಟ್ಟಿಸುತ್ತದೆ. ಹೀಗೆ ಸಿದ್ಧವಾದ ಡೊಳ್ಳಿನ ತೂಕ ನಾಲ್ಕು ಕೆ.ಜಿ.ಯಿಂದ ಐದು ಕೆ.ಜಿ.ವರೆಗೆ ಇರುತ್ತದೆ. ಕುರುಬರು ತಾವೇ ತಯಾರಿಸಿಕೊಂಡ ಡೊಳ್ಳನ್ನು ಬಡಿಯುತ್ತಾರೆ. ಹಾಗೂ ಇತರರಿಗೆ ಸಹ ಡೊಳ್ಳನ್ನು ಬಡಿಯಲು ಕೊಡುತ್ತಾರೆ. ಈ ಜನಪದ ಚರ್ಮವಾದ್ಯ ಎರಡು ರೀತಿಯಲ್ಲಿ ಬಳಕೆಯಾಗುತ್ತದೆ. ಒಂದು ಡೊಳ್ಳನ್ನು ಹೊಟ್ಟೆಯ ಮೇಲೆ ಬರುವಂತೆ ಕೊರಳಿಗೆ ಹಾಕಿಕೊಂಡಾಗಾಲಿ ಅಥವಾ ಸೊಂಟಕ್ಕೆ ಕಂಬಳಿ ಸುತ್ತಿ ಅದರ ಮೇಲೆ ಕಟ್ಟಿಕೊಂಡು ಬಲಗೈಯ ಗುಣಿಯಿಂದ ಬಡಿಯುವಾಗ ಎಡಗೈ ಸಾಥಿ ಪಡೆದು ಬಾರಿಸುತ್ತ ಕುಣಿಯುವುದನ್ನು 'ಡೊಳ್ಳುಕುಣಿತ' ಅಥವಾ ಮೇಳ, ಮಜಲು ಎಂದು ಕರೆಯುತ್ತಾರೆ. ಈ ಮೇಳದ ಸಹವಾದ್ಯ ಪರಿಕರಗಳಾಗಿ ಜೋಡು ಕಂಚಿನತಾಳ, ಒಂದು ಹಿತ್ತಾಳೆ ಜಾಗಟೆ, ಕೆಲವೊಮ್ಮೆ ಕೊಳಲನ್ನು ಸಹ ಬಳಸುತ್ತಾರೆ. ಡೊಳ್ಳನ್ನು ಕುಣಿಯುತ್ತಾ ಬಾರಿಸುವ ಬದಲು ಡೊಳ್ಳಿನ ಮೇಲೆ ಕೈಪೆಟ್ಟು ಹಾಕುತ್ತ ಅದನ್ನು ತಾಳವನ್ನಾಗಿ ಪರಿವರ್ತಿಸಿಕೊಂಡು ಹಾಡಿನ ಮೂಲಕ ಕುಣಿಯುತ್ತಾರೆ.

### ೩.೪ ಡೊಳ್ಳಿನ ವೈಲಕ್ಷಣಗಳು

೧. ಇದೊಂದು ಚರ್ಮವಾದ್ಯವಾಗಿದೆ.

೨. ಎಲ್ಲಾ ಚರ್ಮವಾದ್ಯಗಳಲ್ಲಿಯೇ ಅತಿದೊಡ್ಡ ಗಾತ್ರವನ್ನು ಹೊಂದಿದೆ.

೩. ಹೊನ್ನಿ ಮತ್ತು ಬೇವಿನ ಮರದ ಕಟ್ಟಿಗೆಯನ್ನು ಉಪಯೋಗಿಸುತ್ತಾರೆ.

೪. ಎಲ್ಲಾ ಚರ್ಮವಾದ್ಯಗಳಲ್ಲಿಯೇ ಅತಿ ಶ್ರೇಷ್ಠವಾದ ವಾದ್ಯವಾಗಿದ್ದು, ಇದನ್ನು ಧಾರ್ಮಿಕವಾಗಿ ಪೂಜಿಸುತ್ತಾರೆ.

೫. ಡೊಳ್ಳಿನ ಬಲಭಾಗಕ್ಕೆ ಹೋತಿನ ಚರ್ಮ ಹಾಗೂ ಎಡಭಾಗಕ್ಕೆ ಆಡಿನ ಚರ್ಮವನ್ನು ಉಪಯೋಗಿಸುತ್ತಾರೆ.

೬. ಈ ವಾದ್ಯವು ೪ ರಿಂದ ೫ ಕೆ.ಜಿ. ತೂಕದ ಭಾರವನ್ನು ಹೊಂದಿರುತ್ತದೆ.

೭. ಒಂದು ಡೊಳ್ಳಿನ ತಯಾರಿಕೆಯ ಖರ್ಚು ೪ ಸಾವಿರದಿಂದ ೫ ಸಾವಿರದವರೆಗೆ ಇರುತ್ತದೆ.

೮. ಒಂದು ಡೊಳ್ಳಿನ ತಯಾರಿಕೆಗೆ ಒಂದು ತಿಂಗಳ ಕಾಲಾವಧಿ ಬೇಕಾಗುತ್ತದೆ.

೯. ಹೆಗಲಿಗೆ ಹಾಗೂ ಸೊಂಟಕ್ಕೆ ಕಟ್ಟಿಕೊಂಡು ಬಾರಿಸುತ್ತಾರೆ.

೧೦. ಡೊಳ್ಳು ಬಾರಿಸಲು ೧ ೧/೨ ಅಡಿಯ ಬೇವಿನಕಟ್ಟಿಗೆಯ ಗುಣಿಯನ್ನು ಬಳಸುತ್ತಾರೆ.

೧೧. ಡೊಳ್ಳಿನ ಬಲಭಾಗವನ್ನು ಗುಣಿಯಿಂದ ಬಾರಿಸುತ್ತಾರೆ. ಎಡಭಾಗವನ್ನು ಎಡಗೈಯಿಂದ ಬಾರಿಸುತ್ತಾರೆ.

೧೨. ಈ ವಾದ್ಯವನ್ನು ಶುಭಕಾರ್ಯಗಳಲ್ಲಿ ಮಾತ್ರ ಉಪಯೋಗಿಸುತ್ತಾರೆ. ಅಶುಭ ಕಾರ್ಯಗಳಿಗೆ ಬಳಸುವುದಿಲ್ಲ.

೧೩. ಡೊಳ್ಳಿನ ಪಡುಗವನ್ನು ಬಡಿಗೆಗಾರರಿಂದ ಕೆತ್ತಿಸಿಕೊಂಡು ಬಂದು, ಕುರುಬರು ಆ ಪಡಗಕ್ಕೆ ಚರ್ಮವನ್ನು ಬಿಗಿದು ಡೊಳ್ಳನ್ನು ತಯಾರಿಸುತ್ತಾರೆ.

೧೪. ಡೊಳ್ಳನ್ನು ಕುರುಬರೇತರು ಸಹಿತ ಬಾರಿಸುತ್ತಾರೆ.

**ಅಡಿಟಿಪ್ಪಣಿ**


೧. ಕಿಟ್ಟೆಲ್‌ರವರ ಕನ್ನಡ - ಇಂಗ್ಲಿಶ್ ನಿಘಂಟು

೨. ಕ್ಯಾತನಹಳ್ಳಿ ರಾಮಣ್ಣ, ಜನಪದ ನಿಘಂಟು

೩. ಡಾ. ಶಿವಾನಂದ ಗುಬ್ಬಣ್ಣನವರ, ದೇವ್ರ್ ಬಂದಾವ್ ಬನ್ನಿರೇ

೪. ಬೋರಲಿಂಗಯ್ಯ ಹಿ.ಚಿ. (ಸಂ), ಕರ್ನಾಟಕ ಜನಪದ ಕಲೆಗಳ ಕೋಶ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೦೬, ೧೦೭, ೧೦೮

೫. ಡಾ.ಬಸವರಾಜ ಮಲಶೆಟ್ಟಿ, ಜಾನಪದ ವಾದ್ಯಗಳು

೬. ಕನ್ನಡ ರತ್ನಕೋಶ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು

೪

# ಮುದಿಮಲ್ಲಪ್ಪನವರ ವ್ಯಕ್ತಿತ್ವ ಮತ್ತು ಕಾರ್ಯಸಾಧನೆ

## ೪.೧ ಡೊಳ್ಳು ಕುಣಿತಗಳ ಕಾರ್ಯಕ್ರಮಗಳು

ಡೊಳ್ಳುಕುಣಿತ ಕನ್ನಡನಾಡಿನ ಬಹುಮುಖ್ಯವಾದ ಕಲೆ. ಜನಪದ ಕಲೆಗಳಲ್ಲಿಯೇ 'ಗಂಡುಕಲೆ' ಎಂದು ಪ್ರಸಿದ್ಧಿ ಪಡೆದಿದೆ. ಈ ಡೊಳ್ಳುಕಲೆಯನ್ನು ತಮ್ಮ ಜೀವನದ ಉಸಿರನ್ನಾಗಿಸಿಕೊಂಡವರು ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ 'ಸೊನ್ನ' ಗ್ರಾಮದ ಮುದಿಮಲ್ಲಪ್ಪನವರು. ಸುಮಾರು ಹತ್ತುವರ್ಷದವರಿರುವಾಗಲೇ ಡೊಳ್ಳು ಬಡಿಯಲು ಆರಂಭಿಸಿದರು. ಅವರ ಕಲೆಯ ಆಸಕ್ತಿಯನ್ನು ತಂದೆ ಹಾಗೂ ಅಜ್ಜನವರು ನೀರೆರೆದು ಪೋಷಿಸಿದರು. ತಮ್ಮ ತಂದೆ, ಅಜ್ಜನವರ ಕಾಲದಿಂದಲೂ ಡೊಳ್ಳಿನ ಕಲೆ ತಮ್ಮ ಮನೆತನದ ಕಲೆಯಾಗಿ ಪರಂಪರಾನುಗತವಾಗಿ ಉಳಿದು - ಬೆಳೆದುಕೊಂಡು ಬಂದಿರುವುದನ್ನು ಮುದಿಮಲ್ಲಪ್ಪನವರು ಸಂತೋಷದಿಂದ ಸ್ಮರಿಸಿದ್ದಾರೆ. ಕಾಡುತ್ತಿರುವ ಬಡತನದಲ್ಲಿಯೂ ಅವರು ಡೊಳ್ಳಿನ ಕಲೆಯಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡು, ಡೊಳ್ಳಿನ ಕಲೆಗೆ ಜೀವಂತಿಕೆಯನ್ನು ನೀಡಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಹಾಲುಮತದ ಕುರುಬರು ಸಮಾಜದಲ್ಲಿ ಹುಟ್ಟಿದ ಮುದಿಮಲ್ಲಪ್ಪನವರು ಬೆಳಿಗ್ಗೆಯಿಂದ ಸಂಜೆಯವರೆಗೆ ಕೃಷಿ ಕೆಲಸದಲ್ಲಿ ನಿರತಗೊಂಡು, ರಾತ್ರಿ ಹೊತ್ತು ಧಣಿಯುವ ತನಕ ಗ್ರಾಮದೇವತೆಯಾದ ಸೊಲ್ಲಮ್ಮದೇವಿ ಗುಡಿಯ ಮುಂದೆ ವಿಶಾಲವಾದ ಜಾಗದಲ್ಲಿ ಕಲಾವಿದರ ಜೊತೆಸೇರಿ ಡೊಳ್ಳುಕುಣಿತದ ಜೊತೆಗೆ "ಸೊನ್ನದ ಸೊಲ್ಲಾಂಬಿಕೆ ಡೊಳ್ಳಿನ ಸಂಘ"ದ ಹೊಣೆಗಾರಿಕೆ ಇವರ ದಿನನಿತ್ಯದ

ಹವ್ಯಾಸವಾಗಿತ್ತು. ದಷ್ಟಪುಷ್ಟವಾದ ದೇಹಕೊಪ್ಪುವ ಮುಖದಲ್ಲಿ ಉರಿಮೀಸೆಯನ್ನು ಬಿಟ್ಟುಕೊಂಡು, ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ಹೆಗಲಿಗೆ ಡೊಳ್ಳು ಹಾಕಿಕೊಂಡು, ಡೊಳ್ಳು ಬಡಿಯಲು ನಿಂತರೆ ಈ ಕಲೆಯನ್ನು ನಿಂತು ನೋಡುವವರು ಬೆಕ್ಕನೆ ಬೆರಗಾಗಬೇಕು ಅಂಥ ವ್ಯಕ್ತಿತ್ವ ಮುದಿಮಲ್ಲಪ್ಪನವರದು. ಅವರು ಯಾವತ್ತೂ ಡೊಳ್ಳುಕುಣಿತದಲ್ಲಿ ಭೀಮನೇ ಹೀಗೆಂದು ಆ ಊರಿನ ಸುತ್ತ ಮುತ್ತಲಿನ ಜನರೇ ಮಾತನಾಡಿಕೊಳ್ಳುತ್ತಾರೆ. ಶ್ರೀಯುತರು ಓದು-ಬರಹವನ್ನು ಕಲಿತವರಲ್ಲ ಆದರೂ ರಾತ್ರಿಯಿಂದ ಬೆಳಗಿನ ತನಕ ಕುಣಿದರೂ ಧಣಿಯದ ಉತ್ಸಾಹ ಅವರದಾಗಿತ್ತು.

ಶ್ರೀಯುತರು ನೀಡಿದ ಡೊಳ್ಳಿನ ಕಾರ್ಯಕ್ರಮಗಳು ಅಪಾರ. ಆರಂಭದ ದಿನಗಳಲ್ಲಿ ಬೇರೆಬೇರೆ ಊರುಗಳಿಗೆ ಹೊಗಲಿಕ್ಕೆ ಬಸ್ಸಿನ ಸೌಕರ್ಯವಿರಲಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಮುದಿಮಲ್ಲಪ್ಪನವರು ಬಿಸಿಲು - ಗಾಳಿಯನ್ನು ಲೆಕ್ಕಿಸದೆ, ಹೆಗಲಿಗೆ ಡೊಳ್ಳನ್ನು ಹಾಕಿಕೊಂಡು, ಕೈಯಲ್ಲಿ ಬುತ್ತಿಯನ್ನು ಹಿಡಿದುಕೊಂಡು ಹತ್ತಾರು ಮೈಲುಗಳ ದೂರವನ್ನು ಕಾಲುನಡುಗೆಯಲ್ಲೇ ಹೋಗಿ ತಮ್ಮ ಡೊಳ್ಳಿನ ಕಾರ್ಯಕ್ರಮಗಳನ್ನು ನೀಡಿ ಬಂದಿದ್ದಾರೆ. ಮತ್ತು ಪ್ರತಿಯೊಂದು ಹಬ್ಬ-ಹುಣ್ಣಿಮೆಗಳಲ್ಲಿ, ಜಾತ್ರೆ-ಉತ್ಸವಗಳಲ್ಲಿ, ಸಭೆ-ಸಮಾರಂಭಗಳಲ್ಲಿ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಹಾಗೂ ತಾಲೂಕು-ಜಿಲ್ಲಾ ಮಟ್ಟದಲ್ಲಿ ಅಷ್ಟೇ ಏಕೆ, ರಾಜ್ಯಮಟ್ಟದಿಂದ ರಾಷ್ಟ್ರಮಟದವರೆಗೂ ತಮ್ಮ ಡೊಳ್ಳಿನ ಕಲೆಯನ್ನು ಪ್ರದರ್ಶಿಸಿದ ಕೀರ್ತಿ ಮುದಿಮಲ್ಲಪ್ಪನವರಿಗೆ ಸಲ್ಲುತ್ತದೆ.

### ರಾಜ್ಯಮಟ್ಟದಲ್ಲಿ

ಬೆಂಗಳೂರು, ಮೈಸೂರು, ಚಿತ್ರದುರ್ಗ, ಶಿವಮೊಗ್ಗ, ಹುಬ್ಬಳ್ಳಿ - ಧಾರವಾಡ, ಗದಗ, ಗುಲ್ಬರ್ಗಾ, ಹಂಪಿ ಉತ್ಸವ, ದಸರಾ ಉತ್ಸವ ಹಾಗೂ ಶ್ರೀರಂಗಪಟ್ಟಣ ಮತ್ತು ಬಳ್ಳಾರಿ, ಕೊಪ್ಪಳ, ಚಳ್ಳಕೆರೆ, ರಾಣೆಬೆನ್ನೂರು, ಹೊಸಪೇಟೆ, ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ, ಹರಪನಹಳ್ಳಿ, ಸಂಡೂರು, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ತಾಲೂಕಿನ ಸುತ್ತಮುತ್ತಲಿನ ಹಳ್ಳಿಗಳಾದ ಸೊನ್ನ, ಮೋರಗೇರಿ, ಹೊಳಗುಂದಿ, ಜಿ.ಕೋಡಿಹಳ್ಳಿ, ಸಕ್ರಿಹಳ್ಳಿ, ಚಿಮ್ಮನಹಳ್ಳಿ, ಮಾಲ್ವಿ, ವರಲಹಳ್ಳಿ, ಬನ್ನಿಗೋಳು, ತಂಬ್ರಹಳ್ಳಿ, ಚಿಲುಗೋಡು, ಸೀಗನಹಳ್ಳಿ ಹಾಗೂ ಹಡಗಲಿ ತಾಲೂಕಿನ ಮುದೆನೂರು, ಇಟಗಿ, ಉತ್ತಂಗಿ, ಕತ್ತೆಬೆನ್ನೂರು, ಹೊಸಪೇಟೆ ತಾಲೂಕಿನ ಬ್ಯಾಲಕುಂದಿ, ಹರಪನಹಳ್ಳಿ ತಾಲೂಕಿನ ಬೆಂಡಿಗೇರಿ ದೊಡ್ಡ ತಾಂಡ, ಸಂಡೂರು ತಾಲೂಕಿನ ನಿಡುಗುರ್ತಿ, ಗೀರೆನಹಳ್ಳಿ, ಕೂಡ್ಲಿಗಿ ತಾಲೂಕಿನ ಉಜ್ಜಿನಿ, ಬಳ್ಳಾರಿ ತಾಲೂಕಿನ ಚಳ್ಳಗುರ್ಕಿ ಮೊದಲಾದ ನಮ್ಮ ಕರ್ನಾಟಕ ರಾಜ್ಯದ ಹಲವಾರು ಸಭೆ-ಸಮಾರಂಭ ಮತ್ತು ಉತ್ಸವಗಳಲ್ಲಿ, ಹಬ್ಬ-ಹುಣ್ಣಿಮೆಗಳಲ್ಲಿ ಡೊಳ್ಳಿನ ಪ್ರದರ್ಶನ ನೀಡಿದ್ದಾರೆ.

### ರಾಷ್ಟ್ರಮಟ್ಟದಲ್ಲಿ

ನಮ್ಮ ಭಾರತದ ರಾಜಧಾನಿಯಾದ ದೆಹಲಿಗೆ ಎರಡು ಬಾರಿ ಹೋಗಿಬಂದಿದ್ದಾರೆ. ಹಾಗೂ ಮುಂಬೈ, ಮದ್ರಾಸ್, ಪಾಂಡಿಚೇರಿ, ಪೂನಾ, ಮಧ್ಯಪ್ರದೇಶ, ತಂಜಾವೂರ್, ಭೂಪಾಲ್, ಕಲ್ಕತ್ತಾ, ಮಹಾರಾಷ್ಟ್ರ

ಇತ್ಯಾದಿ ರಾಜ್ಯ ಹಾಗೂ ರಾಷ್ಟ್ರಗಳ ನಾನಾ ನಗರಗಳಿಗೆ ಹೋಗಿ ಡೊಳ್ಳಿನ ಕಲೆಯನ್ನು ಪ್ರದರ್ಶಿಸಿದ ಕೀರ್ತಿ ಮುದಿಮಲ್ಲನವರಿಗೆ ಸಲ್ಲುತ್ತದೆ.

**ಅಂತರರಾಷ್ಟ್ರೀಯ ಮಟ್ಟದಲ್ಲಿ**

ಶ್ರೀ ಮುದಿಮಲ್ಲಪ್ಪನವರಿಗೆ ಜರ್ಮನಿ'ಗೆ ಹೋಗುವ ಸುವರ್ಣ ಅವಕಾಶ ಒದಗಿಬಂದಿತು. ಆದರೆ ಹೊರದೇಶಕ್ಕೆ ಹೋಗಲು ಹಿಂಜರಿದಿದ್ದರಿಂದ ಈ ಅವಕಾಶವನ್ನು ಶಿಕಾರಿಪುರ (ಹಾಸನ ಜಿಲ್ಲೆ)ದ ಡೊಳ್ಳಿನ ಸಂಘದವರು ಉಪಯೋಗಿಸಿಕೊಂಡು, ಜರ್ಮನಿಯಲ್ಲಿ ಡೊಳ್ಳಿನ ಕಾರ್ಯಕ್ರಮ ನೀಡಿ ಬಂದಿದ್ದಾರೆ. ಇಂಥಹ ಸುವರ್ಣಾವಕಾಶದಿಂದ ವಂಚಿತರಾಗುವುದಕ್ಕೆ ಕಾರಣ ತಾಯಿನಾಡಿನ ಮೇಲೆ ಅಪಾರವಾದ ಪ್ರೀತಿ ಅವರನ್ನು ಕಟ್ಟಿಹಾಕಿತು. ಬಹುದೂರದ ದೇಶಕ್ಕೆ ಹೋದರೆ ನಾವು ಮತ್ತೆ ನಮ್ಮ ದೇಶಕ್ಕೆ ವಾಪಸ್ಸು ಬರುತ್ತೇವೆಯೋ ಅಥವಾ ಇಲ್ಲವೋ ಎಂಬ ಅನುಮಾನದಿಂದ ವಿದೇಶಕ್ಕೆ ಹೋಗಲು ನಿರಾಕರಿಸಿದರು. ಡೊಳ್ಳಿನ ಕಲೆ ಮುದಿಮಲ್ಲಪ್ಪನವರನ್ನು ವಿದೇಶಕ್ಕೆ ಹೋಗುವ ಅವಕಾಶವನ್ನು ತಂದುಕೊಟ್ಟಿತು. ಇಂಥಹ ಕಲಾ ಪ್ರತಿಭೆಯನ್ನು ಹೊಂದಿದ ವ್ಯಕ್ತಿಯಾಗಿದ್ದರು.

**ಡೊಳ್ಳು ಪ್ರದರ್ಶನಗಳ ವಿವರ**

- ೧೯೭೫-೭೬ರಲ್ಲಿ ನಡೆದ ಜಾನಪದ ಕಲಾಮಹೋತ್ಸವ ಹಂಪಿ.
- ೧೯೭೭ರಲ್ಲಿ ಕನ್ನಡಸಾಹಿತ್ಯ ಪರಿಷತ್ತಿನ ವಜ್ರಾಮಹೋತ್ಸವ ಬೆಂಗಳೂರು.
- ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ವತಿಯಿಂದ ಕಲಬುರ್ಗಿಯಲ್ಲಿ ೧೯೮೧ರಲ್ಲಿ ನಡೆದ ಕರ್ನಾಟಕ ಜಾನಪದ ಕಲಾಮಹೋತ್ಸವ.
- ೧೯೮೨ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಜಾನಪದ ಕಲಾಮೇಳ.
- ೧೯೮೩ರಲ್ಲಿ ಮೈಸೂರಿನಲ್ಲಿ ನಡೆದ ದಸರಾ ಉತ್ಸವದ ಸಾಂಸ್ಕೃತಿಕ ಕಾರ್ಯಕ್ರಮ.
- ನವದೆಹಲಿ ೧೯೮೦ರಲ್ಲಿ ನಡೆದ ಗಣರಾಜೋತ್ಸವದಲ್ಲಿ ನಡೆದ ಸಾಂಸ್ಕೃತಿಕ ಕಾರ್ಯಕ್ರಮ.
- ೧೯೮೪ರಲ್ಲಿ ಸಹ ಗಣರಾಜೋತ್ಸವದ ಅಂಗವಾಗಿ ನಡೆದ ಸಾಂಸ್ಕೃತಿಕ ಕಾರ್ಯಕ್ರಮ.
- ೧೯೮೫-೮೬ರಲ್ಲಿ ಗುಲ್ಬರ್ಗಾ ವಿಭಾಗದ ಯುವಜನ ಮೇಳದಲ್ಲಿ ಪಾಲ್ಗೊಂಡಿದ್ದರು.
- ೧೯೮೧ರಲ್ಲಿ ಬಳ್ಳಾರಿಯಲ್ಲಿ ಮೈಸೂರು ದಸರಾ ಅಂಗವಾಗಿ ನಡೆಸಿದ ಸಾಂಸ್ಕೃತಿಕ ಕಾರ್ಯಕ್ರಮ
- ೧೯೮೧ರಲ್ಲಿ ಬೆಂಗಳೂರಿನಲ್ಲಿ ಗಣರಾಜೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.
- ೧೯೮೨ರಲ್ಲಿ ಜಿಲ್ಲಾ ಜನತಾಪಕ್ಷ ಬಳ್ಳಾರಿ ಸಂಯುಕ್ತ ಆಶ್ರಯದಲ್ಲಿ ಗಣೇಶೋತ್ಸವ ಕಾರ್ಯಕ್ರಮ.

- ೧೯೮೭ರಲ್ಲಿ ಹಂಪೆಯಲ್ಲಿ ನಡೆದಿರುವ ಪುರಂದರ ಉತ್ಸವದಲ್ಲಿ ಪಾಲ್ಗೊಂಡಿದ್ದರು.
- ೧೯೮೪ರಲ್ಲಿ ಬಳ್ಳಾರಿಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ನಡೆಸಿದ ಕರ್ನಾಟಕ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.
- ೧೯೮೪ರಲ್ಲಿ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಜನಪದ ಸಾಂಸ್ಕೃತಿಕ ಮೇಳದಲ್ಲಿ ಪಾಲ್ಗೊಂಡಿದ್ದರು.
- ೧೯೯೦ರಲ್ಲಿ ನಡೆದ ಹೊಸಪೇಟೆಯಲ್ಲಿ ಅಖಿಲಭಾರತ ತೃತಿಯ ಶರಣಸಾಹಿತ್ಯ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದರು.
- ೧೯೯೩ರಲ್ಲಿ ಕೊಪ್ಪಳದಲ್ಲಿ ನಡೆದ ೬೨ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದರು.
- ೧೯೯೫ರಲ್ಲಿ ಹೂವಿನಹಡಗಲಿಯಲ್ಲಿ ನಡೆದ ರಾಜ್ಯಮಟ್ಟದ ಜಾನಪದ ಸಮಾವೇಶದಲ್ಲಿ ಪಾಲ್ಗೊಂಡಿದ್ದರು.
- ೧೯೯೮ರಲ್ಲಿ ಮೈಸೂರಿನಲ್ಲಿ ನಡೆದ ಅಖಿಲಭಾರತ ಜಾನಪದ ಸಮಾವೇಶದಲ್ಲಿ ಪಾಲ್ಗೊಂಡಿದ್ದರು.

ಹೀಗೆ ಹಲವಾರು ಡೊಳ್ಳಿನ ಕಾರ್ಯಕ್ರಮಗಳನ್ನು ತಮ್ಮ ಜೀವಿತದ ಕಾಲದವರೆಗೂ ನೀಡುತ್ತಾ ಬಂದಿರುವರು. ತಮ್ಮ ಜೀವನದ ಉಸಿರಾಗಿಸಿಕೊಂಡು, ಶ್ರದ್ಧಾಭಾವನೆಯೊಂದಿಗೆ ಈ ಕಲೆಯ ಉಳುವಿಗಾಗಿ ಸಾಕಷ್ಟು ಶ್ರಮಿಸಿದ ಶ್ರಮಜೀವಿ ಮುದಿಮಲ್ಲಪ್ಪನವರು. ಈ ಪರಿಶ್ರಮದ ಫಲವಾಗಿ ಕರ್ನಾಟಕ ಸರ್ಕಾರವು ೨೦೦೧ನೇ ಸಾಲಿನ ಅತ್ಯುನ್ನತ 'ಜಾನದ ಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

### ೪.೨ ಹಲವಾರು ತಂಡಗಳಿಗೆ ಡೊಳ್ಳಿನ ತರಬೇತಿ

ಡೊಳ್ಳು ಬಡಿಯುವ ಕಲೆ ಶ್ರೀಯುತರಿಗೆ ತಾತ-ಮುತ್ತಾತನ ಕಾಲದಿಂದಲೂ ಪರಂಪರಾನುಗತವಾಗಿ ಹರಿದುಬಂದಿದೆ. ಈ ಕಲೆಯನ್ನು ಉಳಿಸಿ-ಬೆಳೆಸಬೇಕೆಂಬುದೇ ಮುದಿಮಲ್ಲಪ್ಪನವರ ಜೀವನದ ಮುಖ್ಯ ಧ್ಯೇಯವಾಗಿತ್ತು ಆದ್ದರಿಂದ ತಮ್ಮ ಮನೆತನ ಕಲೆಯನ್ನು ಉಳಿಸಿದ್ದಾರೆ. ಹಾಗೂ ಅವರ ತಮ್ಮನಾದ ಗುಡ್ಡಪ್ಪ, ಮಗನಾದ ಶಿವರಾಮಪ್ಪ, ಮೊಮ್ಮಗನಾದ ವಿರುಪಾಕ್ಷಿಗೆ ಸಹ ಡೊಳ್ಳು ಬಡಿಯುವ ಕಲೆಯನ್ನು ಧಾರೆ ಎರೆದು ಬೆಳೆಸಿದ್ದಾರೆ. ಇತರರಿಗೂ ಸಹ ಈ ಕಲೆಯ ಬೀಜವನ್ನು ಬಿತ್ತಿ, ಅದರ ಪೋಷಣೆಗಾಗಿ ಸಾಕಷ್ಟು ಶ್ರಮಿಸಿದ್ದಾರೆ. ಇದಕ್ಕೆ ಸಾಕ್ಷಿಯಂತೆ ಸೊನ್ನ ಗ್ರಾಮದಲ್ಲಿ 'ಶ್ರೀ ಸೊನ್ನದ ಸೊಲ್ಲಾಂಬಿಕೆ ಡೊಳ್ಳಿನ ಸೇವ ಸಂಘ' ಹಾಗೂ ಮೋರಗೇರಿಯಲ್ಲಿ ಒಂದು ಡೊಳ್ಳಿನ ಸಂಘವನ್ನು ಕಟ್ಟಿ ಬೆಳೆಸಿದ ಕೀರ್ತಿ ಶ್ರೀಯುತರಿಗೆ ಸಲ್ಲುತ್ತದೆ. ಅಷ್ಟೇ ಅಲ್ಲದೆ ಅನೇಕ ಹಳ್ಳಿಗಳಲ್ಲಿ ಹಾಗೂ ನಗರಗಳಲ್ಲಿ ಕನ್ನಡ ಸಂಸ್ಕೃತಿ ಇಲಾಖೆಯ ವತಿಯಿಂದ ಡೊಳ್ಳಿನ ಬಗ್ಗೆ ಆಸಕ್ತಿ ಹೊಂದಿದ ಕಲಾವಿದರಿಗೆ ಡೊಳ್ಳಿನ ತರಬೇತಿಯನ್ನು ನೀಡಿದ್ದಾರೆ. ಹಾಗೂ ಖಾಸಗಿಯಾಗಿ ಹಲವು ತಂಡಗಳಿಗೆ ತರಬೇತಿಯನ್ನು ಕೊಟ್ಟಿದ್ದಾರೆ.

**ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಮೂರು ತಂಡಗಳಿಗೆ ತರಬೇತಿ ಕೊಟ್ಟಿದ್ದಾರೆ.**

೧. ಬೆಂಗಳೂರಿನ ರಾಮನಗರದ ಡೊಳ್ಳಿನ ಆಸಕ್ತಿ ಕಲಾವಿದರಿಗೆ ಕನ್ನಡ ಸಾಹಿತ್ಯ ಇಲಾಖೆ ವತಿಯಿಂದ ಒಂದು ತಿಂಗಳವರೆಗೆ ಡೊಳ್ಳಿನ ತರಬೇತಿ ಕೊಟ್ಟಿದ್ದಾರೆ.

೨. ಬಳ್ಳಾರಿ ಜಿಲ್ಲಾ ಹಡಗಲಿ ತಾಲೂಕು 'ಮದಲಗಟ್ಟಿ' ಗ್ರಾಮಲ್ಲಿ ಇಲಾಖೆವತಿಯಿಂದ ಒಂದುತಿಂಗಳವರೆಗೆ ಆಸಕ್ತಿ ಕಲಾವಿದರಿಗೆ ತರಬೇತಿ ನೀಡಿದ್ದಾರೆ.

೩. ದಾವಣಗೇರಿ ಜಿಲ್ಲಾ ಹರಪನಹಳ್ಳಿ ತಾಲೂಕು 'ಬೆಂಡಿಗೇರಿ ದೊಡ್ಡ ತಾಂಡ'ದಲ್ಲಿ ಆಸಕ್ತರಿಗೆ ಒಂದುತಿಂಗಳ ಕಾಲ ಡೊಳ್ಳಿನ ತರಬೇತಿ ನೀಡಿದ್ದಾರೆ.

**ಖಾಸಗಿಯಾಗಿ ಹಲವು ತಂಡಗಳಿಗೆ ಡೊಳ್ಳಿನ ತರಬೇತಿ**

೧. ಶ್ರೀಯುತರ ಹುಟ್ಟೂರಾದ ಬಳ್ಳಾರಿ (ಜಿ) ಹಗರಿಬೊಮ್ಮನಹಳ್ಳಿ (ತಾ) ಸೊನ್ನದ ಗ್ರಾಮದಲ್ಲಿ ಡೊಳ್ಳಿನ ಆಸಕ್ತಿ ಕಲಾವಿದರಿಗೆ ತರಬೇತಿ ಕೊಟ್ಟಿದ್ದಾರೆ. 'ಸೊನ್ನದ ಸೊಲ್ಲಾಂಬಿಕೆ ಡೊಳ್ಳಿನ ಸಂಘ'ವನ್ನು ಹುಟ್ಟುಬೆಳೆಸಿದ ಹಿರಿಮೆ ಅವರಿಗೆ ಸಲ್ಲುತ್ತದೆ. ಈ ಸಂಘಕ್ಕಾಗಿ ಬಹಳ ಶ್ರಮಿಸಿ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿ 'ಅತ್ಯುತ್ತಮವಾದ ಡೊಳ್ಳಿನ ಸಂಘ' ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಈ ಸಂಘದಲ್ಲಿ ಇವರೇ ಕೇಂದ್ರಬಿಂದುವಾಗಿದ್ದರು.

೨. ಹಗರಿಬೊಮ್ಮನಹಳ್ಳಿ ತಾಲೂಕು ಮೊರಗೇರಿ ಗ್ರಾಮದಲ್ಲಿ 'ಮೋರಗೇರಿ ದುರ್ಗಾಂಬಿಕ ಯುವಕರ ಡೊಳ್ಳಿನ ಸಂಘಕ್ಕೆ' ತರಬೇತಿ ನೀಡಿದ್ದಾರೆ.

೩. ಹೊಸಪೇಟೆ ತಾಲೂಕು ಮರಿಯಮ್ಮನಹಳ್ಳಿಯ ಹೋಬಳಿ ಗ್ರಾಮವಾದ 'ಗುಂಡಾ'ದ ಆಸಕ್ತಿ ಕಲಾವಿದರ ತಂಡಕ್ಕೆ ಡೊಳ್ಳಿನ ತರಬೇತಿ ಕೊಟ್ಟಿದ್ದಾರೆ.

೪. ಸಂಡೂರು ತಾಲೂಕು 'ನಿಡುಗುರ್ತಿ' ಗ್ರಾಮದಲ್ಲಿ ಒಂದು ತಂಡಕ್ಕೆ ತರಬೇತಿ ನೀಡಿದ್ದಾರೆ.

೫. ಹಗರಿಬೊಮ್ಮನಹಳ್ಳಿ ತಾಲೂಕು 'ಮಾಲ್ವಿ' ಗ್ರಾಮದಲ್ಲಿ ಒಂದು ತಂಡಕ್ಕೆ ತರಬೇತಿ ನೀಡಿದ್ದಾರೆ.

೬. ಹಡಗಲಿ ತಾಲೂಕು 'ಕಂದಗಲ್ಲುಪುರ'ದಲ್ಲಿ ಒಂದು ತಂಡಕ್ಕೆ ತರಬೇತಿ ನೀಡಿದ್ದಾರೆ.

೭. ಸಂಡೂರು ತಾಲೂಕು 'ಗೀರೆನಹಳ್ಳಿ' ಗ್ರಾಮದಲ್ಲಿ ಒಂದು ತಂಡಕ್ಕೆ ತರಬೇತಿ ನೀಡಿದ್ದಾರೆ.

೮. ಹೊಸಪೇಟೆ ತಾಲೂಕು 'ಬ್ಯಾಲಕುಂದಿ' ಗ್ರಾಮದಲ್ಲಿ ಒಂದು ತಂಡಕ್ಕೆ ತರಬೇತಿ ನೀಡಿದ್ದಾರೆ.

೯. ಹಗರಿಬೊಮ್ಮನಹಳ್ಳಿ ತಾಲೂಕಿನ ಜಿ.ಕೊಡಿಹಳ್ಳಿ, ವರಲಹಳ್ಳಿ, ನೆಲ್ಲುಕುದುರೆ (ಹಳೇ) ಗ್ರಾಮಗಳಲ್ಲಿ ಸಹ ಒಂದೊಂದು ತಂಡಕ್ಕೆ ಡೊಳ್ಳಿನ ತರಬೇತಿ ನೀಡಿದ್ದಾರೆ.

ಹೀಗೆ ಮುದಿಮಲ್ಲಪ್ಪನವರಿಂದ ಹತ್ತು ಹಲವು ತಂಡಗಳು ಡೊಳ್ಳಿನ ತರಬೇತಿಯನ್ನು ಪಡೆದುಕೊಂಡಿವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ಮೂರು ತಂಡಗಳಿಗೆ ಒಂದುತಿಂಗಳ ಕಾಲಾವಧಿಯಲ್ಲಿ ತರಬೇತಿಯನ್ನು ನೀಡಿ ಕಲೆಯ ಬೆಳವಣಿಗೆಗೆ ಸಹಕರಿಸಿದ್ದಾರೆ. ಹಾಗೂ ಇಲಾಖೆಯು ಸಹ ಡೊಳ್ಳಿನ ಕಲೆಗೆ ಪ್ರೋತ್ಸಾಹ ನೀಡಿದೆ. ತರಬೇತಿಯ ಅವಧಿಯಲ್ಲಿ ಅವರಿಗೆ ವಸತಿ ಸೌಲಭ್ಯವನ್ನು ಇಲಾಖೆಯವರೇ ಒದಗಿಸಿಕೊಟ್ಟಿದ್ದರು. ಒಂದು ತಂಡವು ಡೊಳ್ಳಿನ ಕಲೆಯನ್ನು ರೂಢಿಸಿಕೊಳ್ಳಬೇಕೆಂದರೆ ಕನಿಷ್ಠಪಕ್ಷ ಒಂದು ತಿಂಗಳ ಕಾಲಾವಧಿ ಬೇಕಾಗುತಿತ್ತು. ಹೀಗೆ ಹಲವು ತಂಡಗಳಿಗೆ ಖಾಸಗಿ ತರಬೇತಿ ಕೊಟ್ಟಿದ್ದಾರೆ. ಡೊಳ್ಳು ಕುಣಿತದ ತಂಡದಲ್ಲಿ ಸಾಮಾನ್ಯವಾಗಿ ನಾಲ್ಕು ಜನರಿಂದ ಹಿಡಿದು ಹತ್ತು-ಹನ್ನೆರಡು ಜನರಿರುತ್ತಾರೆ ಮತ್ತು ಕೆಲವು ತಂಡದ ಜನರು ಸ್ವಲ್ಪ ಚತುರತೆಯನ್ನು ಹೊಂದಿದ್ದರೆ ಅಂತಹ ತಂಡವು ಬೇಗನೇ ಕಲಿಯುವ ಅವಕಾಶ ಹೊಂದಿರುತ್ತದೆ. ಇನ್ನು ಕೆಲವು ತಂಡದಲ್ಲಿ ಮಂದಗತಿ ಜನರನ್ನು ಹೊಂದಿದ್ದರೆ ಅಂತಹ ತಂಡವು ಡೊಳ್ಳಿನ ಕಲೆಯನ್ನು ರೂಢಿಸಿಕೊಳ್ಳುವುದು ಬಹುದಿನಗಳು ಬೇಕಾಗುತ್ತವೆ. ಡೊಳ್ಳಿನ ತರಬೇತಿಯಲ್ಲಿ ವಯಸ್ಸಿನ ಕಟ್ಟಳೆಯಿಲ್ಲ, ಕಲಿಯುವ ಆಸಕ್ತಿಯನ್ನು ಹೊಂದಿದ ಯುವಕರಾಗಲಿ, ಮಧ್ಯವಯಸ್ಕರಾಗಲಿ ಆದರೆ ಡೊಳ್ಳು ಹೊತ್ತುಕೊಂಡು ಕುಣಿಯುವ ದೈಹಿಕ ಶಕ್ತಿ ಮುಖ್ಯವಾಗಿ ಬೇಕಾಗುತ್ತದೆ.

ಬಳ್ಳಾರಿ ಜಿಲ್ಲೆಯ ಹಲವು ತಾಲೂಕಿನ ಹಳ್ಳಿಯ ಜನರು ಡೊಳ್ಳುಬಡಿಯುವ ಕಲೆಯನ್ನು ಕಲಿಯಬೇಕೆಂಬ ಹಂಬಲವನ್ನು ಹೊಂದಿದ ಆಸಕ್ತರು ಬಂದು, ಮುದಿಮಲ್ಲಪ್ಪನವರೊಂದಿಗೆ ಮಾತನಾಡಿ ಡೊಳ್ಳುಬಡಿಯುವುದನ್ನು ಕಲಿಸಲಿಕ್ಕೆ ಬರಬೇಕೆಂದು ವೀಳ್ಯಾವನ್ನು ಕೊಟ್ಟು ಹೋಗುತ್ತಿದ್ದರು. ಹೀಗೆ ಹತ್ತಾರು ಹಳ್ಳಿಗಳಿಗೆ ಹೋಗಿ ತಮ್ಮ ಕಲಾ ಸರಸ್ವತಿಯಾದ ಡೊಳ್ಳು ಬಡಿತವನ್ನು ಕಲಿಸಿ ಬರುತ್ತಿದ್ದರು. ಇದರಿಂದ ಅವರಿಗೆ ಯಾವುದೇ ಸರ್ಕಾರವಾಗಲಿ, ಸಂಘ-ಸಂಸ್ಥೆಗಳಾಗಲಿ ಆರ್ಥಿಕ ನೆರವು ನೀಡುತ್ತಿರಲಿಲ್ಲ. ಕರೆದುಕೊಂಡಹೋದ ಹಳ್ಳಿಯ ಜನರೇ ಇವರಿಗೆ ತಮ್ಮ ಕೈಲಾದಷ್ಟು ಹಣ ಜೋಡಿಸಿ ತರಬೇತಿ ಮುಗಿದನಂತರ ವೀಳ್ಯದ ಜೊತೆಗೆ ಇಟ್ಟು ಕೊಟ್ಟುಕಳಿಸುತ್ತಿದ್ದರು. ಊಟದ ವ್ಯವಸ್ಥೆ ಮತ್ತು ಬಸ್ಸಿನ ಚಾರ್ಜನ್ನು ಸಹ ಹಳ್ಳಿಗರೇ ವಹಿಸಿಕೊಳ್ಳುತ್ತಿದ್ದರು. ಎಂದಿಗೂ ಅವರು ಇಷ್ಟೇ ಹಣವನ್ನು ಕೊಡಬೇಕೆಂದು ಕರಾರುವಕ್ಕಾಗಿ ಹೇಳಿದವರಲ್ಲ. ಕಲೆಯ ಉಳುವಿಗಾಗಿ ಶ್ರಮಿಸುತ್ತಿದ್ದರೇ ಹೊರತು ಹಣಕ್ಕಾಗಿ ಅಲ್ಲ. ಬಡತನದ ಬೇಗೆಯಲ್ಲಿದ್ದರೂ ಸಹ ಹಣಕ್ಕಾಗಿ ಹಂಬಲಿಸಿದವರಲ್ಲ. ಸರಳ-ಸಜ್ಜನಿಕೆಯ ಸಹಾನುಭೂತಿಯುಳ್ಳವರಾಗಿದ್ದರು.

''ಒಂದು ಡೊಳ್ಳಿನ ತಂಡದಲ್ಲಿ ನಾಯಕನ ಪಾತ್ರ ಮುಖ್ಯವಾಗಿರುತ್ತದೆ. ತಂಡದ ನಾಯಕನು ಉಳಿದ ಕಲಾವಿದರ ನಡುವೆ ನಿಂತುಕೊಂಡು, ಕೈಯಲ್ಲಿ ತಾಳಗಳನ್ನು ಹಿಡಿದುಕೊಂಡು ಹಾಡು ಹೇಳಿಕೊಂಡು ಡೊಳ್ಳನ್ನು ಬಾರಿಸುವುದೂ ರೂಢಿಯಲ್ಲಿದೆ. ಹಾಡುಗಳಿಗಾಗಿಯೇ ಪ್ರತ್ಯೇಕವಾದ ಕೈಪಟ್ಟು ಬಳಸುವ ಕ್ರಮವಿದೆ. ಇದಕ್ಕೆ ''ಕೈಪೆಟ್ಟುಹಾಡು'' ಎಂದು ಕರೆಯುತ್ತಾರೆ. ಡೊಳ್ಳು ಬಾರಿಸುವಾಗ ಬಲಗೈಯಲ್ಲಿ ಮಾತ್ರ ಕೋಲಿರುತ್ತದೆ. ಒಮ್ಮೆ ಕೋಲಿನಿಂದ ಬಾರಿಸಿದರೆ ಎಡಗೈ ಒಂದು ಪೆಟ್ಟು ಕೊಡಬೇಕು. ಬಲಗೈ ಗುಣಿಯ ಬಡಿತ 'ಬ್ರಹ್ಮದೊಸ್' ಎಂದು ಸಪ್ಪಳ ಮೂಡಿದರೆ ಎಡಗೈ ಪೆಟ್ಟು 'ಡೌಂವ' ಎಂದು ನಾದ ಎಬ್ಬಿಸುತ್ತದೆ. ಹೀಗೆ ಅದು 'ಬ್ರಹ್ಮ

ದೊಡ್ಡಾಂವ' ಎಂದು ಉಗ್ಗಡಿಸುತ್ತದಂತೆ! ವೃತ್ತಾಕಾರವಾಗಿ ನಿಂತುಕೊಂಡು ತಂಡದ ಸದಸ್ಯರು ನಿಧಾನವಾಗಿ ಡೊಳ್ಳುಬಾರಿಸಲು ತೊಡಗುವುದರೊಂದಿಗೆ ಸುತ್ತಲು ಪ್ರಾರಂಭಿಸುತ್ತಾರೆ. ಹಿಮ್ಮೇಳವೂ ಜೊತೆಗೂಡಿರುತ್ತದೆ. ಕ್ರಮೇಣ ಗತ್ತು ಏರುತ್ತಾ ಹೋದಂತೆ ಡೊಳ್ಳನ್ನು ಶಕ್ತಿಮೀರಿ ಬಡಿಯುವಾಗ ಒಮ್ಮೊಮ್ಮೆ ಕೋಲು ಮುರಿಯುವಂತೆ ಕೇಳುವವರ ಕಿವಿ ಗಡಚಿಕ್ಕುವಂತೆ ಬಾರಿಸುತ್ತಾರೆ. ಒಂದು ಗತ್ತು ಶಿಖರವನ್ನು ಮುಟ್ಟಿದ ಬಳಿಕ ನಿಲ್ಲಿಸಿದಂತಾಗಿ, ಮತ್ತೆ ನಿಧಾನವಾಗಿ ಬೇರೊಂದು ಪ್ರಕಾರದ ಬಡಿತ ಆರಂಭವಾಗುತ್ತದೆ. ಗತ್ತುಗಳೆಲ್ಲವೂ ಮುಗಿದ ಮೇಲೆ ಬಾರಿಸುವಿಕೆಯನ್ನು ನಿಲ್ಲಿಸಿ ಮತ್ತೇ ಹಾಡನ್ನು ಆರಂಭಿಸುತ್ತಾರೆ.

ಜನಪದ ಕಲೆಗಳಲ್ಲಿ ಅತ್ಯಂತ ಮುಖ್ಯವಾಗಿ 'ಗಂಡುಕಲೆ' ಎನಿಸಿಕೊಂಡಿರುವ ಡೊಳ್ಳುಬಡಿಯುವ ಕಲೆ ಪುರುಷರಿಗೆ ಮಾತ್ರ ಮೀಸಲಾದ ಕಲೆ. ಇಡೀ ಚರ್ಮವಾದ್ಯಗಳಲ್ಲೇ ಶ್ರೇಷ್ಠವಾದ ವಾದ್ಯವೆಂದರೆ 'ಡೊಳ್ಳುವಾದ್ಯ'. ಇದನ್ನು ಕುರುಬರು ದೇವರೆಂದು ಪೂಜಿಸುತ್ತಾರೆ. ಹೆಣ್ಣುಮಕ್ಕಳು ಈ ವಾದ್ಯವನ್ನು ಮುಟ್ಟಿದರೆ ಡೊಳ್ಳು ಸಿಡಿದು ಹೋಗುತ್ತದೆ ಎಂಬ ನಂಬಿಕೆಯಿಂದ ಈಗಲೂ ಅದನ್ನು ಮುಟ್ಟುವುದಿಲ್ಲ. ತಲತಲಾಂತರಗಳಿಂದ ದೈವೀ ಆರಾಧನೆಯ ಸಾಧನವಾಗಿ ಬೆಳೆದುಬಂದ ಈ ಕಲೆ ಇತ್ತೀಚಿನ ದಿನಗಳಲ್ಲಿ ಮನರಂಜನೆಯ ಮಾಧ್ಯಮವಾಗಿ ಮನ್ನಣೆಗಳಿಸಿದೆ. ಯಾವುದೇ ಧಾರ್ಮಿಕ, ಸಾಂಸ್ಕೃತಿಕ, ಜಾತ್ರೆ, ಉತ್ಸವ, ಸಭೆ - ಸಮಾರಂಭಗಳಲ್ಲಿ ಡೊಳ್ಳುಕುಣಿತ ಒಂದು ಮುಖ್ಯ ಪ್ರದರ್ಶನ ಕಲೆಯಾಗಿ ಪ್ರಸಿದ್ಧಿ ಪಡೆದಿದೆ.

## ೪.೩ ಹಲವು ಪ್ರಶಸ್ತಿಗಳು

ಉತ್ತರ ಕರ್ನಾಟಕದ ಜನಪದ ಕಲೆಗಳಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದಂತಹ ಕಲೆ ಡೊಳ್ಳು ಬಡಿಯುವ ಕಲೆ. ಡೊಳ್ಳು ನೃತ್ಯ ಮತ್ತು ಹಾಡುಗಳಿಗೆ ಹಿರಿಮೆಯನ್ನು ತಂದುಕೊಟ್ಟಂತಹ ಹಿರಿಯ ಜಾನಪದ ಕಲಾವಿದರು ಮುದಿಮಲ್ಲಪ್ಪನವರು. ತಮ್ಮ ಜೀವನದುದ್ದಕ್ಕೂ ಕಷ್ಟಗಳನ್ನು ಕಂಡುಉಂಡವರು. ಹಗಲು ರಾತ್ರಿಯೆನ್ನದೆ ದುಡಿದು ಜೀವನ ಸಾಗಿಸಿದ ಶ್ರಮಜೀವಿ. ಅವರು ಡೊಳ್ಳಿನ ಕಲೆಗೆ ಸಲ್ಲಿಸಿದ ಸೇವೆಯಿಂದ ಹಲವಾರು ಪ್ರಶಸ್ತಿಗಳು ಅವರನ್ನು ಹುಡುಕಿಕೊಂಡು ಬಂದಿವೆ. ನಮ್ಮ ಭಾರತದ ರಾಜಧಾನಿಯಾದ ದೆಹಲಿ, ಮುಂಬೈ, ಮದ್ರಾಸ್, ಪೂನಾ, ಮಧ್ಯಪ್ರದೇಶ ಇತ್ಯಾದಿ ದೊಡ್ಡ ದೊಡ್ಡ ನಗರಗಳನ್ನು ಸುತ್ತಿ ಬಂದೆನಲ್ಲ ಎನ್ನುವ ಕುತೂಹಲ-ಆಶ್ಚರ್ಯ ಸಹಜವಾಗಿದೆ. ಸೊನ್ನ'ದಂಥ ಪುಟ್ಟ ಜಾಲಿಯ ಹೂವಿಗೆ ಜನಪದ ಕಂಪನ್ನು ತುಂಬಿಕೊಟ್ಟ ಮುದಿಮಲ್ಲಪ್ಪನವರು ಡೊಳ್ಳುಗಳಿಗೆ ಜೀವತುಂಬಿ ಹಾಡಿದಂಥವರು. ಆ ಹಾಡಿನಲ್ಲಿಯೇ ತಮ್ಮ ಬಾಳಿನ ಸುಖ-ದುಃಖಗಳನ್ನು ಕಳೆದಂಥವರು. ಹೊಲದಲ್ಲಿ ಬಿತ್ತಿ ಬೆಳೆಯುವುದು, ಒಡ್ಡುಹಾಕುವುದರ ಜೊತೆಗೆ ತಮ್ಮ ಕುಲದ ವೃತ್ತಿಯಾದ ಕುರಿ ಮೇಯಿಸುವುದು ಇವರ ಕಾಯಕವಾಗಿತ್ತು. ಈ ಕಾಯಕದ ಶ್ರಮಕ್ಕೆ ಒಂದು ಬಗೆಯಲ್ಲಿ ಕ್ರಿಯಾಶಿಲತೆಯನ್ನು, ಚಲನಶೀಲತೆಯನ್ನು ತುಂಬಿದ್ದು ಈ ಡೊಳ್ಳಿನ ಕಲೆ.

೧. ೧೯೮೦ರಲ್ಲಿ 'ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ' ರಾಜ್ಯ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

೨. ೧೯೯೧ರಲ್ಲಿ ಶ್ರೀ ಬಂಗಾರಪ್ಪನವರು ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ ಕರ್ನಾಟಕ ಸರ್ಕಾರವು ಜಾನಪದ ಕ್ಷೇತ್ರದಲ್ಲಿ ಸಲ್ಲಿಸಿರುವ ಅನುಪಮ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿ ೧೯೯೧ನೆಯ ಸಾಲಿನ 'ರಾಜ್ಯೋತ್ಸವ ಪ್ರಶಸ್ತಿ'ಯನ್ನು ನೀಡಿ ಗೌರವಿಸಿದೆ.

೩. ಜಾನಪದ ಕ್ಷೇತ್ರದಲ್ಲಿ ಅಪೂರ್ವಸೇವೆ ಸಲ್ಲಿಸಿದ ರಾಜ್ಯ ಕಲಾವಿದರಿಗೆ ನೀಡುವ ಅತ್ಯುನ್ನತ 'ಜಾನಪದ ಶ್ರೀ' ಪ್ರಶಸ್ತಿಯನ್ನು ಜಾನಪದ ಕಲೆಗಳಲ್ಲಿ 'ಗಂಡುಕಲೆ'ಯಾದ ಡೊಳ್ಳುಬಾರಿಸುವ ಕಲೆಯನ್ನು ಅಖಿಲಭಾರತ ಮಟ್ಟಕ್ಕೆ ಕೊಂಡೊಯ್ದು ಕೀರ್ತಿವಂತರಾದ ಶ್ರೀ ಹಮ್ಮಿಗಿ ಮುದಿಮಲ್ಲಪ್ಪನವರಿಗೆ ಕರ್ನಾಟಕ ಸರ್ಕಾರವು "೨೦೦೧ರ ಜಾನಪದ ಶ್ರೀ" ಪ್ರಶಸ್ತಿಯ ಜೊತೆಗೆ ಒಂದುಲಕ್ಷ ರೂಪಾಯಿಗಳ ನಗದು ಪುರಸ್ಕಾರದೊಂದಿಗೆ ಪ್ರಶಸ್ತಿ ಪುತ್ಥಳಿ ಹಾಗೂ ಪ್ರಶಸ್ತಿ ಫಲಕವನ್ನು ದಿನಾಂಕ ೩೦.೩.೨೦೦೨ ಶನಿವಾರದಂದು ರವೀಂದ್ರ ಕಲಾಕ್ಷೇತ್ರ ಬೆಂಗಳೂರಿನಲ್ಲಿ ನೀಡಿ ಗೌರವಿಸಿದೆ. ಇದು ೮೦ ವರ್ಷಗಳವರೆಗೆ ಡೊಳ್ಳಿನ ಕಲೆಯಲ್ಲಿ ಮುದಿಮಲ್ಲಪ್ಪನವರ ಅವಿರತ ಸೇವೆಗಾಗಿ ಸಂದ ಪುರಸ್ಕಾರವಾಗಿದೆ.

ಅವರಿಗೆ ಅನೇಕ ಸಂಘ-ಸಂಸ್ಥೆಗಳು ಡೊಳ್ಳಿನ ಕಲೆಯನ್ನು ಮೆಚ್ಚಿಕೊಂಡು ಹಲವು ಮೆಚ್ಚುಗೆಯ ಪ್ರಶಂಸಾ ಪತ್ರಗಳನ್ನು ನೀಡಿ, ಸನ್ಮಾನಿಸಿ ಕಲೆಗೆ ಜೀವತುಂಬುವಂತೆ ಮಾಡಿದ್ದಾರೆ. ಹಲವಾರು ರಾಷ್ಟ್ರಗಳ ನಾನಾ ನಗರಗಳಲ್ಲಿ ಡೊಳ್ಳಿನ ಕಲೆಯನ್ನು ಪ್ರದರ್ಶಿಸಿ ಅನೇಕ ಮೆಚ್ಚುಗೆಪತ್ರಗಳು ಸಂದಿವೆ. ಆದರೆ ಅವರು ಅರಕಲು-ಮುರಕಲು ಗುಡಿಸಲಿನಲ್ಲಿ ವಾಸ ಮಾಡುತ್ತಿದ್ದರಿಂದ ಮಳೆಗಾಲದಲ್ಲಿ ಅವರ ಮನೆ ಸೋರುತ್ತಿದ್ದರಿಂದ ಇಂತಹ ಹಲವಾರು ಪ್ರಶಸ್ತಿ ಪತ್ರಗಳು ಮಳೆಗೆ ಆಹುತಿಯಾಗಿವೆ. ಇನ್ನು ಅಳಿದುಳಿದ ಪತ್ರಗಳನ್ನು ನುಸೆಹುಳುಗಳು ತಿಂದುಹಾಕಿ ಸಂಪೂರ್ಣ ನಾಶಗೊಳಿಸಿವೆ. ಅವುಗಳಲ್ಲೇ ಉಳಿದುಕೊಂಡಂತವು ಅಲ್ಪ ಮಾತ್ರ ಸಿಗುತ್ತವೆ. ಶ್ರೀಯುತರನ್ನು ಹಲವು ಬಾರಿ ಸನ್ಮಾನಿಸಿದ್ದಾರೆ. ಜಾನಪದ ಕ್ಷೇತ್ರದಲ್ಲೇ ಉನ್ನತವಾದ ಪ್ರಶಸ್ತಿಯನ್ನು ಪಡೆದು ನಮ್ಮ ಕನ್ನಡನಾಡಿಗೆ ಕೀರ್ತಿ ತಂದುಕೊಟ್ಟಿದ್ದಾರೆ.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕು ಎರಡು ಬಾರಿ 'ಜಾನಪದ ಶ್ರೀ' ಪ್ರಶಸ್ತಿಯನ್ನು ತನ್ನ ಮಡಿಲಿಗೆ ಹಾಕಿಕೊಂಡಿದೆ. ಮೊದಲು ೧೯೯೨ರಲ್ಲಿ ಕರ್ನಾಟಕ ಸರ್ಕಾರದ ವತಿಯಿಂದ ಜಾನಪದ ಶ್ರೀ ಪ್ರಶಸ್ತಿ ಫಲಕದೊಂದಿಗೆ ತೊಗಲುಗೊಂಬೆಯಾಟದ ಕಲಾವಿದರಾದ ಶ್ರೀ ಯಡ್ರಾಮನಹಳ್ಳಿ ದೊಡ್ಡಭರಮಪ್ಪ ನವರಿಗೆ ದೊರೆಯಿತು. ಆನಂತರ ೨೦೦೧ನೇ ಸಾಲಿನ 'ಜಾನಪದ ಶ್ರೀ' ಪ್ರಶಸ್ತಿಯನ್ನು ಡೊಳ್ಳಿನ ಕಲಾವಿದರಾದ ಶ್ರೀ ಮುದಿಮಲ್ಲಪ್ಪನವರಿಗೆ ದೊರೆಯಿತು. ಅತ್ಯುನ್ನತವಾದ ಈ ಪ್ರಶಸ್ತಿಯನ್ನು ಎರಡು ಬಾರಿ ಹಗರಿಬೊಮ್ಮನಹಳ್ಳಿ ತಾಲೂಕಿಗೆ ತಂದುಕೊಟ್ಟ ಕೀರ್ತಿ ಆ ಕಲಾವಿದರಿಗೆ ಸಲ್ಲುತ್ತದೆ. ಹಲವು ಕ್ಷೇತ್ರಗಳಲ್ಲಿ ಹಿಂದುಳಿದಿದ್ದರೂ ಜಾನಪದ ಕಲಾ ಕ್ಷೇತ್ರದಲ್ಲಿ ಕಲೆ ಮತ್ತು ಸಂಸ್ಕೃತಿಯಲ್ಲಿ ಹಗರಿಬೊಮ್ಮನಹಳ್ಳಿ ತಾಲೂಕು ಶ್ರೀಮಂತವಾಗಿದೆ.

ಅಂತಹ ಅತ್ಯುನ್ನತವಾದ ಪ್ರಶಸ್ತಿ ತಮ್ಮ ಮಡಲಿಗೆ ಬಂದಾಗ ಶ್ರೀಯುತರಿಗೆ ೮೦ ವರ್ಷಗಳು ಕಳೆದಿದ್ದವು. ಇನ್ನೂ ಹತ್ತಾರು ವರ್ಷ ಬದುಕುವವರ ಹಾಗೆ ಕಾಣಿಸುತ್ತಿದ್ದರು. ಇನ್ನು ಜನಪದ ಗತ್ತು, ಗಾಂಭೀರ್ಯತೆಗಳು ಅವರ ನಡುಗೆ, ಮಾತಿನಲ್ಲಿ ಕಾಣುತ್ತಿತ್ತು. ಪ್ರಶಸ್ತಿ ಬಂದಾಗಲಂತೂ ಅವರ ಮನಸ್ಸಿನಲ್ಲಿ ಸಂತೋಷದ ಛಾಯೇ ಎದ್ದುಕಾಣುತ್ತಿತ್ತು. ಆದರೆ ಅವರ ಕಣ್ಣುಗಳು ಮಂಜುಗೂಡಿದ್ದರೂ ಕಣ್ಣ ಒಳಗಿನ ಕನಸುಗಳಿಗೆ ಮಂಜಾಗಿರಲಿಲ್ಲ. ಅವರ ಕೈಗಳು ಪ್ರಶಸ್ತಿ ಫಲಕಗಳನ್ನು ಮುಟ್ಟಿ ಸಂತಸಪಟ್ಟಿವೆಯೇ ಹೊರತು ಅವುಗಳನ್ನು ಕಣ್ಣಾರೆ ನಿಚ್ಚಳವಾಗಿ ನೋಡಲಿಕ್ಕೆ ಆಗಲಿಲ್ಲ, ಆ ಸಮಯಕ್ಕೆ ಇವರ ಕಣ್ಣುಗಳಲ್ಲಿ ಮಂಜು ಆವರಿಸುತ್ತು. ಮಸುಕಾದ ಮಂಜುವಿನಲ್ಲೇ ಪ್ರಶಸ್ತಿ ಫಲಕವನ್ನು ಸ್ವೀಕರಿಸಿದರು.

ಮುದಿಮಲ್ಲಪ್ಪನವರ ಕುಟುಂಬ ವರ್ಗದವರಾದ ಅವರ ಮಕ್ಕಳು, ಮೊಮ್ಮಕ್ಕಳು, ಅಣ್ಣ - ತಮ್ಮಂದಿರು ಹಾಗೂ ಅವರ ಮಡದಿಯು "ಇಂಥಹ ಒಂದು ದೊಡ್ಡ ಪ್ರಶಸ್ತಿ ಬಂದಾಗ ನಮಗೆ ತುಂಬಾ ಸಂತೋಷವಾಯಿತು" ಎಂದು ಹೇಳುತ್ತಿದ್ದರು. ಏಕೆಂದರೆ ಅವರು ಹಗಳಿರುಳು ಸಾಕಷ್ಟು ಶ್ರಮಿಸಿ ನಮ್ಮನ್ನು ಬೆಳೆಸಿದರು. ಜೊತೆಗೆ ಡೊಳ್ಳಿನ ಕಲೆಯನ್ನು ಸಹ ನಮಗೆ ಕಲಿಸಿಕೊಟ್ಟರು. ತಮ್ಮ ಜೀವವಿರುವ ತನಕ ಡೊಳ್ಳನ್ನು ಹೆಗಲಿಗೆ ಹಾಕಿಕೊಂಡು ಬಿಸಿಲು - ಮಳೆಯನ್ನದೆ ಸಾಕಷ್ಟು ಊರುಗಳಲ್ಲಿ ಡೊಳ್ಳು ಬಡಿದು ಬಂದಿದ್ದಾರೆ. ಅವರು ರಾತ್ರಿ ಸಮಯದಲ್ಲಿ ವಿಶ್ರಾಂತಿಯನ್ನು ಪಡೆಯದೆ ಹೆಗಲಿಗೆ ಡೊಳ್ಳನ್ನು ಹಾಕಿಕೊಂಡು ಸೊಲ್ಲಮ್ಮನ ಗುಡಿ ಮುಂದೆ ಡೊಳ್ಳಿನ ತಯಾರಿ ನಡೆಸಲಿಕ್ಕೆ ಹೋಗುತ್ತಿದ್ದರು. ಜೊತೆಗೆ ಹಳ್ಳಿಯ ಹುಡುಗರಿಗೆ ಸಹ ಕಲೆಯ ಬಗ್ಗೆ ಹೇಳಿ ಕೊಡುತ್ತಿದ್ದರು ಮತ್ತು ನಮ್ಮ ಹಳ್ಳಿಯಲ್ಲೇ ಒಂದು ಡೊಳ್ಳಿನ ಸಂಘವನ್ನು ನಿರ್ಮಿಸಿದ್ದಾರೆ. ಯಾವುದಾದರೂ ಕಾರ್ಯಕ್ರಮಕ್ಕೆ ಹೋಗಬೇಕಾದರೆ ತಮ್ಮ ಸಂಘದವರನ್ನು ಹುಡುಕಿಕೊಂಡು ಬಂದು ಡೊಳ್ಳಿನ ಪೂರ್ವತಯಾರಿ ನಡೆಸುತ್ತಿದ್ದರು. ಒಂದು ವೇಳೆ ಸಂಘದ ಜನರಲ್ಲಿ ಒಬ್ಬರೇನಾದರೂ ಸಿಗಲಿಲ್ಲವೆಂದಾಗ ಅವರ ಮನೆಗೆ ನಾಲ್ಕೈದು ಬಾರಿ ಹೋಗಿ ಕೇಳಿ-ವಿಚಾರಿಸಿ ಬರುತ್ತಿದ್ದರು. ಡೊಳ್ಳು ಎಂದರೆ ಮುದಿಮಲ್ಲಪ್ಪನವರಿಗೆ ಅಪಾರವಾದ ಭಕ್ತಿ. ಶ್ರೀಯುತರು ಡೊಳ್ಳನ್ನೇ ಬೀರಪ್ಪದೇವರೆಂದು ಭಕ್ತಿ ಭಾವದಿಂದ ಪೂಜಿಸುತ್ತಿದ್ದರು. ಹಲವಾರು ವರ್ಷಗಳ ಅವಿರತ ಪರಿಶ್ರಮದ ಫಲವೇ ಅಂತಹ ಒಂದು ದೊಡ್ಡ ಪ್ರಶಸ್ತಿ ಅವರ ಪಾಲಿಗೆ ಬಂದಿದೆ ಎಂದು ಅವರ ಮಡದಿ-ಮಕ್ಕಳು, ಮೊಮ್ಮಕ್ಕಳು ಹಾಗೂ ಅವರ ತಂಗಿ, ತಮ್ಮಂದಿರು ತಮ್ಮ ಭಾವನೆಯನ್ನು ವ್ಯಕ್ತಪಡಿಸಿ ಪ್ರಶಸ್ತಿ ಪಡೆದು ಇಡೀ "ಕಪ್ಪುನಾಡಿಗೆ ಕೀರ್ತಿ"ಯನ್ನು ತಂದುಕೊಟ್ಟಿದ್ದಾರೆ ಎಂದು ಸಂತೋಷದಿಂದ ಸ್ಮರಿಸುತ್ತಾರೆ.

ಶ್ರೀಯುತರ ಒಡಹುಟ್ಟಿದ ತಮ್ಮನಾದ ಗುಡ್ಡಪ್ಪನು ಸಹಿತ ಅಣ್ಣನವರು ಹೇಳಿ ಕೊಟ್ಟ ಕಲೆಯನ್ನು ನಾನು ಈಗಲೂ ಮುಂದುವರೆಸಿಕೊಂಡು ಹೋಗುತ್ತಿದ್ದೇನೆ. ಹಾಗೂ ನಾನು ಕೂಡ ಅಣ್ಣನ ಜೊತೆಯಲ್ಲಿ ಹಲವಾರು ಊರುಗಳಿಗೆ ಹೋಗಿಬಂದಿದ್ದೇನೆ. ಅವರು ಯಾವ ಹಳ್ಳಿಗೆ ಹೋಗಲಿ ನನ್ನನ್ನು ಕರೆದುಕೊಂಡು ಹೋಗುತ್ತಿದ್ದರು. ಅದಕ್ಕಾಗಿ ಅವರು ಕಲೆಯ ಬಗ್ಗೆ ತುಂಬಾ ಹೇಳಿಕೊಟ್ಟು ಹೋಗಿದ್ದಾರೆ. ಈ ಕಲೆ ನಮ್ಮ ಮನೆತನದ ಕಲೆ ಇದನ್ನು ನಿಲ್ಲಿಸಬೇಡಿ, ಇನ್ನೂ ಮುಂದೆಯೂ ಸಹ ಇದನ್ನು ಉಳಿಸಿ ಬೆಳೆಸಿರಿ ಎಂದು ಕಿವಿಮಾತು ಹೇಳಿದ್ದಾರೆ. ಮತ್ತು ಅವರ ಮಗ, ಮೊಮ್ಮಗ ಇಬ್ಬರೂ ಸಹ ಡೊಳ್ಳುಬಡಿಯುವ ಕಲೆಯನ್ನು ಕಲಿತಿದ್ದಾರೆ. ಹಬ್ಬ, ಜಾತ್ರೆಗಳಲ್ಲೂ ಬಡಿಯಲಿಕ್ಕೆ ಹೋಗುತ್ತಾರೆ.

## ೪.೪ ಡೊಳ್ಳಿನೊಂದಿಗೆ ಹಳ್ಳಿಯಿಂದ ಡಿಲ್ಲಿಗೆ

ಮಾನವನ ಸಂಪಾದನೆಯಲ್ಲೇ ಅತ್ಯುನ್ನತವಾದ ಆಸ್ತಿ ಎಂದರೆ 'ವಿದ್ಯೆ', 'ಪ್ರತಿಭೆ'. ಪ್ರತಿಯೊಬ್ಬ ಮನುಷ್ಯನಲ್ಲಿ ತನ್ನದೇ ಆದ ಬೌದ್ಧಿಕ ಮಟ್ಟಕ್ಕೆ ಒಂದು ಪ್ರತಿಭೆ ಮರೆಮಾಚಿ ನಿಂತಿರುತ್ತದೆ. ಇದು ಯಾವಾಗ ಹೊರಹೊಮ್ಮುತ್ತದೆ ಎಂಬುದು ಯಾರು ತಿಳಿದಿಲ್ಲ. ಸ್ವತಃ ಪ್ರತಿಭೆಯನ್ನೊಳಗೊಂಡ ವ್ಯಕ್ತಿಗೆ ತಿಳಿದಿರುವುದಿಲ್ಲ. ಸಾರ್ವತ್ರಿಕವಾಗಿ ಪ್ರತಿಭೆ ಹೊರಬಂದಾಗ ಮಾತ್ರ ಇಂಥ ವ್ಯಕ್ತಿಯಲ್ಲಿ ಒಂದು ಅದ್ಭುತ ಪ್ರತಿಭೆಯಿದೆ ಎಂದು ಗುರುತಿಸಲು ಸಾಧ್ಯವಾಗುತ್ತದೆ. ಪ್ರತಿಭೆ ಎಂಬುದು ಸಾರ್ವತ್ರಿಕವಾದದ್ದು ಅದನ್ನು ನಿರ್ದಿಷ್ಟವಾಗಿ ಇಂಥವರಲ್ಲೇ ಅಡಗಿದೆ ಎಂದು ಗುರುತಿಸುವುದು ಕಷ್ಟ. ಜನಸಾಮಾನ್ಯರಲ್ಲಿಯೂ ಅವಿದ್ಯಾವಂತರಲ್ಲಿಯೂ ಕಾಣಬಹುದು. ಆ ಪ್ರತಿಭೆ ಒಳಗಣ್ಣು ತೆರೆದಾಗಲೇ ಒಬ್ಬ ಮನುಷ್ಯನಲ್ಲಿ ಇಂಥಹ ಪ್ರತಿಭೆ, ಕಲೆಯಿದೆ ಎಂಬುದನ್ನು ಗುರುತಿಸಬಹುದು. ಇದಕ್ಕೆ ಅಪವಾದವೆಂಬಂತೆ ಡೊಳ್ಳಿನ ಕಲೆಯಲ್ಲಿ ಪ್ರಸಿದ್ಧರಾದ ಮುದಿಮಲ್ಲಪ್ಪನವರು ಓದು ಬರಹವನ್ನು ಕಲಿಯದ ಅವಿದ್ಯಾವಂತರಾಗಿ ಅವರ ತಾತಾ-ಮುತ್ತಾತರು ಹಾಕಿಕೊಟ್ಟು ಹೋದ ಡೊಳ್ಳುಬಡಿಯುವ ಕಲೆಯನ್ನು ಮುಂದುವರಿಸಿ ತಮ್ಮ ಕುಟುಂಬದಲ್ಲೇ ಯಾರೂ ಹೆಸರು ಮಾಡದ ರೀತಿಯಲ್ಲಿ ಪ್ರಸಿದ್ಧ ಪಡೆದು ಹಲವಾರು ಪ್ರಶಸ್ತಿಗಳನ್ನು ಪಡೆದು ಡೊಳ್ಳುಕಲೆಯನ್ನು ಅಖಿಲಭಾರತದ ಮಟ್ಟಕ್ಕೆ ಕೊಂಡೊಯ್ದ ಕೀರ್ತಿ ಮುದಿಮಲ್ಲಪ್ಪನವರಿಗೆ ಸಲ್ಲುತ್ತದೆ. ಹಾಗೂ ನಮ್ಮ ರಾಜ್ಯದ ವಿವಿಧ ಮೂಲೆಗಳಲ್ಲಿ ಮತ್ತು ದೆಹಲಿ, ಮುಂಬೈ, ಭೂಪಾಲ್, ಪಾಂಡಿಚೇರಿ, ಪೂನಾ, ಮಧ್ಯಪ್ರದೇಶ, ಮಹಾರಾಷ್ಟ್ರ, ಮದ್ರಾಸ್ ಇತ್ಯಾದಿ ರಾಷ್ಟ್ರದ ನಾನಾ ನಗರಗಳಲ್ಲಿ ಹಲವಾರು ಉತ್ಸವಗಳಲ್ಲಿ ಇವರು ಡೊಳ್ಳಿನ ಪ್ರದರ್ಶನವನ್ನು ನೀಡಿದ್ದಾರೆ. ಎಂಟು-ಹತ್ತು ಜನರೊಂದಿಗೆ ಸೇರಿಕೊಂಡು ಹೆಗಲಿಗೆ ಡೊಳ್ಳನ್ನು ಹಾಕಿಕೊಂಡು ಸೊಂಟಕ್ಕೆ ಕಂಬಳಿ ಕಟ್ಟಿಕೊಂಡು ಜಾತ್ರೆ-ಉತ್ಸವ-ಹಬ್ಬ-ಹರಿದಿನಗಳಲ್ಲಿ ಊರೂರು ಸುತ್ತಿಕೊಂಡು ಒಂದೊಂದು ಊರಿನಲ್ಲಿ ಮೂರು ದಿನಗಳವರೆಗೆ ಇದ್ದು ಬಿಡುವಿಲ್ಲದೆ ಡೊಳ್ಳನ್ನು ಬಡಿದರೂ ಧಣಿಯದ ಇವರ ದೇಹದಲ್ಲಿ ಉತ್ಸಾಹದ ಚಿಲುಮೆ ಎದ್ದುಕಾಣುತ್ತಿತ್ತು. ಕೆಲವು ಸಂದರ್ಭಗಳಲ್ಲಿ ಒಂದು ತಂಡದಿಂದ ಇನ್ನೊಂದು ತಂಡಕ್ಕೆ ಡೊಳ್ಳು ಬಡಿಯುವಾಗ ಸ್ಪರ್ಧೆಗೆ ಇಳಿಯುತ್ತಿದ್ದರು. ಅಂತಹ ಸಮಯದಲ್ಲಿ ಮುದಿಮಲ್ಲಪ್ಪನವರ ತಂಡ ಬಂದಿದೆ ಎಂದು ಕೇಳಿದರೆ ಸಾಕು ಯಾವ ತಂಡದವರೂ ಇವರ ತಂಡದ ಮೇಲೆ ಸ್ಪರ್ಧೆಗಿಳಿಯುತ್ತಿರಲಿಲ್ಲ. ಕಾರಣ ಈ ಡೊಳ್ಳು ಬಡಿಯುವ ಕಲೆಯಲ್ಲಿ ಸಾಕಷ್ಟು ನಿಪುಣತೆಯನ್ನು ಪಡೆದ ವ್ಯಕ್ತಿಯಾಗಿದ್ದರು. ಯಾರಾದರು ಕೆಣಕಿ ಸ್ಪರ್ಧೆಗಿಳಿದರೆಂದರೆ ಮುಗಿಯಿತು. ಆ ತಂಡವು ಇನ್ನೊಂದು ಬಾರಿ ಇವರ ತಂಡದ ಮೇಲೆ ಸ್ಪರ್ಧೆಗಿಳಿಯಬಾರದು ಎಂದು ಉದ್ಗರಿಸುವಂತೆ ಮಾಡುತ್ತಿದ್ದರು. ಈ ಕಲೆಯಲ್ಲಿ ಇವರನ್ನು ಮೀರಿಸುವ ಎದೆಗಾರಿಕೆ ಯಾವ ಕಲಾವಿದರಲ್ಲೂ ಇರುತ್ತಿರಲಿಲ್ಲ. ಆದ್ದರಿಂದ ಅನೇಕ ಸುತ್ತಮುತ್ತಲಿನ ಹಳ್ಳಿಯ ಜನರು ಶ್ರೀಯುತರನ್ನು ಡೊಳ್ಳುಬಡಿಯುವ ಕಾಯಕದಲ್ಲಿ ಎಂದೆಂದಿಗೂ ಭೀಮನೇ! ಎಂದು ಉದ್ಗರಿಸುತ್ತಾರೆ. ಹೀಗೆ ಇವರು ಹೋದಹೋದ ಊರುಗಳಲ್ಲೆಲ್ಲಾ ಹೆಸರು ಕೀರ್ತಿಯನ್ನು ಸಂಪಾದಿಸಿಕೊಂಡು ಬಂದರು. ಹೀಗೆ ಅವರು ಊರೂರು ಸುತ್ತುವ ಈ ಕಾಯಕವೇ ಮುದಿಮಲ್ಲಪ್ಪನವರನ್ನು ದೇಶ ಸುತ್ತುವಂತೆ ಮಾಡಿತು.

ಇದರ ಫಲವಾಗಿ ನಮ್ಮ ಭಾರತದೇಶದ ರಾಜಧಾನಿಯಾದ 'ದೆಹಲಿ'ಗೆ ಎರಡು ಬಾರಿ ಹೋಗಿ ಡೊಳ್ಳುಬಡಿಯುವ ಕಲೆಯನ್ನು ೧೯೮೦ ಮತ್ತು ೧೯೮೪ರಲ್ಲಿ ಗಣರಾಜೋತ್ಸವ ಪ್ರಯುಕ್ತ ದೆಹಲಿಯಲ್ಲಿ ನಡೆದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಡೊಳ್ಳು ಕಲೆಯನ್ನು ಪ್ರದರ್ಶಿಸಿ ಬಂದ ಕೀರ್ತಿ ಮುದಿಮಲ್ಲಪ್ಪನವರಿಗೆ ಸಲ್ಲುತ್ತದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ಇವರು ಎರಡು ಬಾರಿ ದೆಹಲಿಗೆ ಪ್ರಯಾಣ ಬೆಳೆಸಿದ್ದರು. ಅವರು ಓದು-ಬರಹವನ್ನು ಕಲಿಯದ ಅವಿದ್ಯಾವಂತರಾದರು ನಮ್ಮ ನಿಮ್ಮಂಥವರು ನೋಡದ ದೆಹಲಿಯಂಥ ಮಹಾನಗರವನ್ನು ನೋಡುವ ಅವಕಾಶ ಪಡೆದುಕೊಂಡಿದ್ದಾರೆ. ಮೊದಲಬಾರಿಗೆ ದೆಹಲಿಗೆ ಹೋದಾಗ ಅವನ ಮನಸ್ಸಿನಲ್ಲಿ ಏನೋ ಒಂದು ಆತಂಕದ ಛಾಯೆ ಮೂಡಿತ್ತು. ಏಕೆಂದರೆ ತಮ್ಮ ಜೀವದ ಉಸಿರಾದ ಡೊಳ್ಳಿನ ಕಲೆಯೇ ಅವರನ್ನು ಉನ್ನತಮಟ್ಟಕ್ಕೆ ತೆಗೆದುಕೊಂಡು ಹೋಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ದೆಹಲಿಗೆ ಹೋಗಲಿಕ್ಕೆ ಇಲಾಖೆ ವತಿಯಿಂದ ಪತ್ರ ಮುಖಾಂತರ ಸಂದೇಶವನ್ನು ಕಳುಹಿಸಿತು. ಆ ಪತ್ರದಲ್ಲಿದ್ದ ವಿಷಯವನ್ನು ಓದಿಸಿದ ಬಳಿಕ ಅವರನ್ನು ಡೊಳ್ಳುಬಡಿಯುವ ಕಲೆಯು ಕೈಬೀಸಿ ದೆಹಲಿಗೆ ಕರೆದಿತ್ತು. ಈ ವಿಷಯವನ್ನು ಕೇಳಿ ಸ್ವಲ್ಪಹೊತ್ತು ಚಿಂತಾಕ್ರಾಂತರಾದರು, ಅಷ್ಟುದೂರದ ಊರಿಗೆ ಮೊದಲಬಾರಿಗೆ ಹೋಗಲಿಕ್ಕೆ ಅವರ ಮನಸ್ಸಿನಲ್ಲಿ ಭಯ ಆತಂಕವನ್ನು ಹೊಂದಿದ್ದರು. ಜೊತೆಗೆ ಭಾಷೆಯ ತೊಂದರೆಯು ಅವರ ಮನಸ್ಸಿನಲ್ಲಿ ಕಾಡುತ್ತಿತ್ತು. ಏಕೆಂದರೆ ಅವರಿಗೆ ಹಿಂದಿ ಭಾಷೆ ಮಾತನಾಡಲಿಕ್ಕೆ ಬರುವುದಿಲ್ಲ. ಎಷ್ಟೋ ಅಕ್ಷರಸ್ಥರಿಗೂ ಹಿಂದಿ ಭಾಷೆಯನ್ನು ಮಾಡನಾಡುವುದು ಸ್ವಲ್ಪ ಕಷ್ಟವಾಗುತ್ತದೆ. ಅಂತದ್ದರಲ್ಲಿ ಏನು ಓದು ಕಲಿಯದ ಅವರಿಗೆ ಕನ್ನಡವನ್ನು ಮಾತನಾಡವುದೇ ಸಾಕಾಗುತ್ತದೆ. ಆದ್ದರಿಂದ ಅವರ ಜೊತೆಯಲ್ಲಿ ಹಿಂದಿಭಾಷೆ ಬಲ್ಲವರನ್ನು ಜೊತೆಗೆ ಕಳುಹಿಸಿಕೊಟ್ಟದ್ದರು ಹಾಗೂ ಮುದಿಮಲ್ಲಪ್ಪನವರ ಜೊತೆಯಲ್ಲಿ ಅವರ ತಮ್ಮನಾದ ಗುಡ್ಡಪ್ಪ ಹಾಗೂ ಗ್ರಾಮದ ಮುಖಂಡರಾದ ವಡಚನಾಳು ತಿಂದಪ್ಪನವರನ್ನು ಸಹ ಕರೆದುಕೊಂಡು ಹೋಗಿದ್ದರು. ಶ್ರೀಯುತರಿಗೆ ವಿದ್ಯೆಯಲ್ಲಿ ಬಡತನವಿತ್ತೇ ಹೊರತು ಕಲೆಯಲ್ಲಿ ಇವರು ಶ್ರೀಮಂತರಾಗಿದ್ದರು.

ಮುದಿಮಲ್ಲಪ್ಪನವರ ಡೊಳ್ಳುಬಡಿಯುವ ಕಲೆಯನ್ನು ಮೆಚ್ಚಿಕೊಂಡು ಹಲವಾರು ಊರಿನ ಗ್ರಾಮಸ್ಥರು ಹಾಗೂ ಹಲವಾರು ಗಣ್ಯವ್ಯಕ್ತಿಗಳು ಮತ್ತು ಅನೇಕ ಸಂಘ-ಸಂಸ್ಥೆಗಳು ಕಲೆಯ ಉಳುವಿಗಾಗಿ ಪ್ರೋತ್ಸಾಹ - ಬೆಂಬಲ ನೀಡಿದರು. ನಮ್ಮ ನಾಡಿನ ಸಂಸ್ಕೃತಿಯ ಪ್ರತೀಕವಾದ ಈ ಡೊಳ್ಳುಕಲೆ ಬರೀ ಹಳ್ಳಿಗಳಿಗೆ ಅಷ್ಟೇ ಸೀಮಿತಗೊಳ್ಳಬಾರದೆಂದು ಹಲವಾರು ದೇಶ-ವಿದೇಶಗಳಲ್ಲಿ ಇದರ ಕೀರ್ತಿ ಪಾತಕೆಯನ್ನು ಹಾರಿಸಬೇಕೆಂದು ಪ್ರೋತ್ಸಾಹಿಸಿದವರು ಹಗರಿಬೊಮ್ಮನಹಳ್ಳಿ ತಾಲೂಕಿನ ಹಿರಿಯ ಸಾಹಿತಿಗಳಾದ ಶ್ರೀ ಗುರುಮೂರ್ತಿ ಪೆಂಡಕೂರುರವರು. ಇಂಥಹ ಒಬ್ಬ ಕಲಾವಿದ ನಮ್ಮ ಗ್ರಾಮೀಣ ಪ್ರದೇಶದಲ್ಲಿರುವುದೇ ಒಂದು ಹೆಮ್ಮೆಯ ವಿಷಯ. ಆದ್ದರಿಂದಲೇ ಗ್ರಾಮೀಣ ಕಲಾವಿದನ ಕಲೆಯನ್ನು ಮೆಚ್ಚಿಕೊಂಡು ಕಲೆ ಮತ್ತು ಕಲಾವಿದನ ಉಳುವಿಗಾಗಿ ಬೆಂಬಲವಾಗಿ ನಿಂತು ಹಲವಾರು ಡೊಳ್ಳಿನ ಕಾರ್ಯಕ್ರಮಗಳಿಗೆ ಹೋಗಲಿಕ್ಕೆ ಪ್ರೋತ್ಸಾಹ ನೀಡಿದರು. ಇಂಥಹ ಕಲಾಪ್ರೋತ್ಸಾಹಕ ಸಹಕಾರದಿಂದ ದೆಹಲಿ, ಮುಂಬೈ, ಭೂಪಾಲ್, ಪಾಂಡಿಚೇರಿ, ಪೂನಾ,

ಮಧ್ಯಪ್ರದೇಶ, ಚೆನ್ನೈ ಇತ್ಯಾದಿ ರಾಷ್ಟ್ರದ ನಾನಾ ನಗರಗಳಲ್ಲಿ ಹಾಗೂ ಹಲವಾರು ಉತ್ಸವಗಳಲ್ಲಿ ಪಾಲ್ಗೊಂಡು ಡೊಳ್ಳಿನ ಕಲೆಯನ್ನು ಪ್ರದರ್ಶಿಸಿದ ಕಲಾವಿದ ಹಾಗೂ ಕಲೆಯನ್ನು ಉಳಿಸಿ ಬೆಳೆಸಿದ ಕೀರ್ತಿ ಶ್ರೀ ಗುರುಮೂರ್ತಿ ಪೆಂಡಕೂರು ಹಾಗೂ ಸೊನ್ನದ ಎಚ್.ಎಂ.ವೀರಭದ್ರಯ್ಯ ಮತ್ತು ವಡಚನಾಳು ತಿಂದಪ್ಪ ಅವರಿಗೆ ಸಲ್ಲುತ್ತದೆ.

**ಅಡಿಟಿಪ್ಪಣಿ**

ಈ ಮಾಹಿತಿಯನ್ನು ಸೊನ್ನದ ಗ್ರಾಮದವರಾದ ವಡಚನಾಳ ತಿಂದಪ್ಪ, ಗುಡ್ಡಪ್ಪ, ಹಗರಿಬೊಮ್ಮನಹಳ್ಳಿಯ ಹಿರಿಯ ಸಾಹಿತಿ ಗುರುಮೂರ್ತಿ ಪೆಂಡಕೂರು, ಎಚ್.ಎಂ. ವೀರಭದ್ರಯ್ಯ, ಶಿವರಾಮಪ್ಪ, ವಿರೂಪಾಕ್ಷಿ ಅವರಿಂದ ಸಂಗ್ರಹಿಸಲಾಗಿದೆ.

# ೫

# ಡೊಳ್ಳಿನ ಹಾಡುಗಳು ಮತ್ತು ಡೊಳ್ಳಿನ ಮಜಲುಗಳು

## ೫.೧ ಡೊಳ್ಳಿನ ಹಾಡುಗಳು

ಕನ್ನಡ ಜನದಪ ಗೀತೆಗಳಲ್ಲಿ ಹೆಣ್ಣುಮಕ್ಕಳ ಹಾಗೂ ಗಂಡುಮಕ್ಕಳ ಹಾಡುಗಳೆಂದು ವಿಭಾಗಿಸಬಹುದಾಗಿದೆ. ಆದರೆ, ಗಂಡುಮಕ್ಕಳ ಹಾಡುಗಳಲ್ಲಿ ಡೊಳ್ಳಿನ ಹಾಡುಗಳಿಗೆ ಪ್ರತ್ಯೇಕ ಸ್ಥಾನವಿದೆ. ಯಾಕೆಂದರೆ, ಲಾವಣಿಹಾಡು, ಹಂತಿಹಾಡು, ಹೋಳಿಹಾಡು ಹಾಗೂ ಇತರ ಹಾಡುಗಳನ್ನು ಎಲ್ಲ ಗಂಡುಮಕ್ಕಳು ಹಾಡುವ ರೀತಿಯೇ ಬೇರೆ. ಡೊಳ್ಳಿನ ಹಾಡುಗಳನ್ನು ಕೇವಲ ಕುರುಬರು ಡೊಳ್ಳಿನೊಂದಿಗೆ ಹಾಡುವುದಿಂದ ಇವುಗಳಿಗೆ ಡೊಳ್ಳಿನ ಹಾಡುಗಳೆಂದು ಕರೆದಂತೆ ತೋರುತ್ತಿದೆ. ಕ್ರಿಯಾಮೂಲವಾಗಿರುವ ಜನಪದ ಸಾಹಿತ್ಯ ಬಹು ಪುರಾತನ ಕಾಲದಿಂದಲೂ ಸೃಷ್ಟಿಗೊಳ್ಳುತ್ತಾ ಬಂದಿದೆ. ಈಗಲೂ ಸೃಷ್ಟಿಗೊಳ್ಳುತ್ತಲಿದೆ ಎಂಬ ಮಾತು ಡೊಳ್ಳಿನ ಹಾಡುಗಳಿಗೇನೂ ಹೊರತಲ್ಲ. ಇಂದು ರಚನೆಗೊಂಡದ್ದು ಜನಪ್ರಿಯ ಸಾಹಿತ್ಯವೆಂದು ಕರೆಯಿಸಿಕೊಂಡರೆ, ನಾಳೆ, ನಾಡಿದ್ದು ಬಹು ಜನಪ್ರಿಯವಾಗಿ ಜನರ ನಾಲಿಗೆಯ ಮೇಲೆ ಜೀವಂತವಾಗಿ ಉಳಿದು ಆವ್ಯೆಯಕ್ತಿಕ ರಚನೆ ಸಾಮೂಹಿಕವಾಗಿ ಪ್ರಚುರತೆಯನ್ನು ಪಡೆದು ಜನಪದ ಸಾಹಿತ್ಯವಾಗಬಲ್ಲದು.

ಡೊಳ್ಳಿನಪದಗಳು ಸಾಮಾನ್ಯವಾಗಿ ಪೌರಾಣಿಕ ವಸ್ತುಗಳನ್ನೇ ಒಳಗೊಂಡಿವೆ ಎಂದರೂ ಸಮಾಜ, ನಿಸರ್ಗ-ವ್ಯಕ್ತಿಗಳನ್ನು ಕುರಿತು ರಚನೆಗೊಳ್ಳದೆ ಉಳಿದಿಲ್ಲ. ಪ್ರಧಾನವಾಗಿ ಪುರಾಣ ಕಥೆಗಳು, ನಡೆ-ನುಡಿಗಳು, ಧಾರ್ಮಿಕ ಪುಣ್ಯ ಪುರುಷರ

ವೃತ್ತಾಂತಗಳು ಡೊಳ್ಳಿನ ಪದಗಳ ವಸ್ತುಗಳಾಗಿವೆ. ಈ ಪದಗಳಲ್ಲಿನ ಪುಣ್ಯ ಕಥೆಗಳ ನೀತಿ, ತತ್ವ, ಧರ್ಮವನ್ನು ಕೇಳಿ ಜನರು ತಮ್ಮ ದೈನಂದಿನ ಬದುಕಿನಲ್ಲಿ ಅಳವಡಿಸಿಕೊಂಡು ಆದರ್ಶಯುತ ಬಾಳನ್ನು ಬಾಳಬೇಕೆಂಬುದೇ ಈ ಪದಗಳ ಮೂಲ ಆಶಯ. ದೈವಭಕ್ತಿಗೆ ಇಲ್ಲಿ ಹೆಚ್ಚಿನ ಪ್ರಾಧಾನ್ಯತೆ ಇರುವುದರಿಂದ ಡೊಳ್ಳಿನ ಪದಗಳನ್ನು 'ಭಕ್ತಿಗೀತೆ'ಗಳೆಂದೂ ಕರೆಯಬಹುದು. ದೈವಭಕ್ತಿಗಂತೂ ಅಲ್ಲಿ ಪ್ರಥಮ ಪ್ರಾಶಸ್ತ್ಯ. ಗೇಯತೆ, ಅಭಿವ್ಯಕ್ತಿಯ ಚಾಕಚಕ್ಯತೆ ಚಮತ್ಕಾರ ಚಾತುರ್ಯವಿರುವ ಡೊಳ್ಳಿನ ಪದಗಳದು ಮನೆರಂಜನೆಗಿಂತ ಮತ ಶ್ರದ್ಧೆಯಲ್ಲಿ ಪ್ರಮುಖ ಪ್ರೇರಣೆಯಾಗಿದ್ದು. ಜನಪದರೊಡನೆ ತಮ್ಮ ದೈನಂದಿನ ಬದುಕಿನಲ್ಲಿ ಅನ್ಯೋನ್ಯ ಸಂಬಂಧ ಸಂಪರ್ಕವನ್ನು ಬೆಳೆಸಿಕೊಳ್ಳದೆ ಪ್ರತ್ಯೇಕವಾಗಿ ಬಾಳಿಕೊಂಡು ಬಂದವರು ಈ ಕಾರಣವಾಗಿ ಬಹುಪಾಲು ಹಾಡುಗಳು ಕುರುಬಕುಲ, ವೃತ್ತಿ, ದೈವದ ಸುತ್ತ ಹೆಣೆದಿರುವುದು ಕಂಡುಬರುತ್ತದೆ. ವಸ್ತುವಿನ ದೃಷ್ಠಿಯಿಂದ ವಿಶ್ಲೇಷಣೆಗೊಳಪಡಿಸಿದಾಗ ಅವುಗಳಲ್ಲಿ ಸಂಪ್ರದಾಯದ ಪರಂಪರೆಯಲ್ಲಿ ಮಾತ್ರ ನಿರೂಪಿತಗೊಳ್ಳುತ್ತಿದ್ದ ಡೊಳ್ಳಿನ ಪದಗಳಲ್ಲಿ ಕಾಲಕ್ರಮೇಣ ಕಡಿಮೆ ಪ್ರಮಾಣದಲ್ಲಿಯಾದರು ನಾಗರಿಕತೆ ನಿಸರ್ಗ ಮತ್ತು ಇತರ ಸಮಾಜದ ಚಿತ್ರಣ ಒಡಮೂಡಿ ಬಂದಿದೆ.

ಈ ಹಾಡುಗಳನ್ನು ಹೇಳುವವರೂ ಕೇಳುವವರೂ ಸಾಮಾನ್ಯ ಜನರು ಹೇಳಿದ್ದನ್ನು ಹೇಳಿದಾಗಲೇ ಅದು ಅವರ ತಲೆಯಲ್ಲಿ ಉಳಿಯುತ್ತದೆ. ಆದ್ದರಿಂದ ಡೊಳ್ಳಿನ ಹಾಡುಗಳಲ್ಲಿ ವಿಷಯದ ಪುನರಾವೃತ್ತಿ ಹೆಚ್ಚಾಗಿರುತ್ತದೆ. ಒಂದು ಸಾಲಿನಲ್ಲಿ ಮುಗಿಯ ಬೇಕಾದುದಕ್ಕೆ ಅವರು ಎರಡು ಸಾಲು ಬಳಸುತ್ತಾರೆ. ಆದರೂ ಈ ಹಾಡುಗಳು ಬೇಸರವನ್ನು ತರುವುದಿಲ್ಲ. ಅದಕ್ಕೆ ಹಾಡುವವರ ಶ್ರದ್ಧೆ, ಭಕ್ತಿ, ನಿಷ್ಠೆಗಳೇ ಕಾರಣ. ಡೊಳ್ಳಿನ ಹಾಡುಗಳು ಒಂದೇ ತಾಳದಲ್ಲಿ ಶುರುವಾಗಿ ಅದೇ ತಾಳದಲ್ಲಿ ಮುಂದುವರಿಯುತ್ತವೆ. ಅಲ್ಲಿ ರಾಗಲಹರಿಗೆ ಸ್ಥಾನವಿಲ್ಲ. ಆಲಾಪಕ್ಕೆ ಅನೂಕೂಲತೆಯಿಲ್ಲ. ತಾಳಬದ್ಧವಾದ ಒಂದೇ ದಾಟಿಯಲ್ಲಿ ಅವು ಕೇಳಿಬಂದರೂ ದೊಡ್ಡ ಹಾಡುಗಳಲ್ಲಿ ವೈವಿಧ್ಯಕ್ಕೆಂದು ಗದ್ಯವನ್ನು ಜೋಡಿಸಿದ್ದುಂಟು. ತಾಳ ಮದ್ದಳೆಯ ಇಂಚರದಲ್ಲಿ ಮುನ್ನಡೆವ ಈ ಹಾಡುಗಳು ತಾಳದ ಪೆಟ್ಟಿಗೆ ಮದ್ದಳೆಯ ಗಡಿಗೆ ಹೊಂದಿಕೊಂಡು ರಾಗಬದ್ಧವಾಗಿ ಕೇಳಿಸುತ್ತವೆ. ಆದ್ದರಿಂದ ಕೇಳುವ ಜನರು ಎಂದೂ ಬೇಸರಪಟ್ಟುಕೊಳ್ಳುವುದಿಲ್ಲ. ಹಾಡಿದಷ್ಟು ಕೇಳಬೇಕೆನಿಸುತ್ತದೆ. ಅವರ ಮನಸ್ಸು ಜನಪದ ಸಾಹಿತ್ಯದಲ್ಲಿ ಡೊಳ್ಳಿನ ಹಾಡಿಗೆ ಮಹತ್ವಸ್ಥಾನವಿರುವುದು. ಈ ಕಾರಣದಿಂದಲೇ.

ಸಾಮಾನ್ಯವಾಗಿ ಡೊಳ್ಳಿನ ಹಾಡುಗಳನ್ನು ಐದು ಜನ ಮೇಳದವರು ಕೂಡಿಕೊಂಡು ಹಾಡುತ್ತಾರೆ. ಇಬ್ಬರು ಮುಮ್ಮೇಳದವರು, ಮೂವರು ಹಿಮ್ಮೇಳದವರು ಮುಮ್ಮೇಳದವರು ಹೆಜ್ಜೆ ಹಾಕುತ್ತ ಹಾವ - ಭಾವ ಪ್ರದರ್ಶಿಸುತ್ತ ಹಾಡು ಹೇಳಲು ಪ್ರಾರಂಭಿಸಿದ ಮೇಲೆ ಹಿಮ್ಮೇಳದವರು ಅದಕ್ಕೆ ಧ್ವನಿಗೂಡಿಸುವುದಲ್ಲದೆ ಡೊಳ್ಳು ಮತ್ತು ತಾಳಗಳನ್ನು ಬಾರಿಸುತ್ತಾರೆ. ಇವುಗಳ ಜೊತೆಗೆ ಕೊಳಲು ನುಡಿಸಿ ಹಾಡಿನ ಇಂಪನ್ನು ಸೊಂಪನ್ನು ಹೆಚ್ಚಿಸಲಾಗುತ್ತಿದೆ. ಡೊಳ್ಳಿನ ಹಾಡುಗಳಲ್ಲಿ ಬಹುತೇಕವಾಗಿ ಕಂಡುಬರುವುದು ಸರಳ ಸುಂದರ ಆಡುಮಾತಿನ ಅಪ್ಪಟ ಜನಪದಶೈಲಿ ನಿರರ್ಗಳವಾಗಿ ಬಳಕೆಯಾದ ಪದಪುಂಜ. ಸರಳವಾದ್ಯ ರಚನಾಕೌಶ್ಯಲತೆ ಡೊಳ್ಳಿನ ಹಾಡುಗಳ ಭಾಷೆ ಕಬ್ಬಿಣದ ಕಡಲೆಯಲ್ಲಾ ನೆನೆಯಿಸಿ ಹುರಿದು ಉಪ್ಪುಹಚ್ಚಿಟ್ಟ ಹುರಿಗಡಲೆಯಂತೆ. ಇಂತಹದೇ

ಶಬ್ಧವನ್ನು ಇಲ್ಲಿಯೇ ಬಳಸಿ ಇಂತಿಷ್ಟೇ ಸಾಲುಗಳಲ್ಲಿ ಪದವನ್ನು ಹಾಡಬೇಕೆಂದು ಹೆಣಗಿದವರಲ್ಲ ಈ ಜನಪದ ಕವಿಗಳು ಆದರೂ ಆಶುಕವಿತ್ವ ಶಕ್ತಿ ಪಡೆದಿರುವ ಇವರು ಚಾಕಚಕ್ಯತೆಯಿಂದ ಸಮಯೋಚಿತ ಅರ್ಥವತ್ತಾದ ಪದಗಳನ್ನು ಬಳಸಿಕೊಂಡಿದ್ದನ್ನು ಡೊಳ್ಳಿನ ಹಾಡುಗಳುದ್ದಕ್ಕೂ ಕಂಡುಕೊಳ್ಳಬಹುದು ಎಲ್ಲಾ ಡೊಳ್ಳಿನ ಹಾಡುಗಳನ್ನು ಅವಲೋಕಿಸಿ ಜನಪದೀಯ ಶಬ್ಧಗಳನ್ನು ಪಟ್ಟಿಮಾಡಿದರೆ ಒಂದು ಉತ್ತಮ 'ಜನಪದ ಶಬ್ಧಕೋಶ'ವಾಗಬಹುದು.

ಛಂದಸ್ಸಿನ ದೃಷ್ಟಿಯಿಂದ ನೋಡಿದರೆ ಡೊಳ್ಳಿನ ಹಾಡುಗಳ ಕವಿಗಾರರು ಪ್ರಾಸ ತರುವ ತ್ರಾಸಕ್ಕಾಗಿ ಗುರು, ಲಘು, ಸಮವಿಷಯತೆಗಾಗಿ ಹೆಣಗಿದವರಲ್ಲ ಮತ್ತು ಒಂದೊಂದು ಪದ ಇಂತಿಷ್ಟೇ ಸಾಲುಗಳಿರಬೇಕೆಂದು ಯೋಚಿಸಿದವರಲ್ಲ. ತಮ್ಮ ಮನಸ್ಸಿಗೆ ತೋಚಿದಂತೆ ಆಗಿಷ್ಟು ಈಗಿಷ್ಟು ಹಾಡಿ, ಹಾಡುಗಳನ್ನು ಪೂರ್ತಿಗೊಳಿಸಿದವರು. ವಸ್ತುಸ್ಥಿತಿ ಹೀಗಿರುವಾಗ ಡೊಳ್ಳಿನ ಹಾಡುಗಳಲ್ಲಿ ಛಂದಸ್ಸಿನ ಲಕ್ಷಣಗಳನ್ನಾಧರಿಸುದು ವ್ಯರ್ಥಪ್ರಯತ್ನವೆಂದರೂ ತಮಗರಿಯದಂತೆ ಸಹಜವಾಗಿ ಹಾಡಿ ಹೊಗಳಿದ ಜನಪದರ ಡೊಳ್ಳಿನ ಹಾಡುಗಳಲ್ಲಿ ಛಂದಸ್ಸಿನ ಛಾಯೇ ಅಲ್ಲಲ್ಲಿ ಗೋಚರವಾಗುವುದನ್ನು ಗುರುತಿಸಬಹುದಾಗಿದೆ. ಡೊಳ್ಳಿನ ಹಾಡುಗಳಲ್ಲಿ ಅಧಿಕವಾಗಿ ಕಂಡುಬರುವುದು 'ಪ್ರಾಸಾ' ಆದಿಪ್ರಾಸ, ಅಂತ್ಯಪ್ರಾಸ, ಅನುಪ್ರಾಸ, ದ್ವಿಪದಿ, ತ್ರಿಪದಿ, ಚೌಪದಿ, ಸಾಂಗತ್ಯ ಹಾಗೂ ರಗಳೆಗಳಲ್ಲಿ ರಚಿತವಾದವುಗಳಾಗಿ ಕಂಡುಬರುತ್ತವೆ. ಹತ್ತು-ಇಪ್ಪತ್ತು ಸಾಲುಗಳಿಂದ ಆರಂಭವಾಗಿ ನೂರಾರು ಸಾಲುಗಳವರೆಗೂ ಡೊಳ್ಳಿನ ಹಾಡುಗಳು ರಚನೆಗೊಂಡಿವೆ. ಡೊಳ್ಳಿನಹಾಡುಗಳ ಭಾಷೆ ಮತ್ತು ಛಂದಸ್ಸಿನ ವೈಶಿಷ್ಟ್ಯವೆಂದರೆ ರೂಪಕ, ಉಪಮಾಲಂಕಾರ ಮತ್ತು ಡೊಳ್ಳಿನ ಹಾಡುಗಳಲ್ಲಿ ಕೆಲವು ಗದ್ಯ-ಪದ್ಯದಿಂದ ಕೂಡಿರುವ ಹಾಡುಗಳ ಸಹ ರಚನೆಗೊಂಡಿವೆ. ಇದರಿಂದ ಹಳಗನ್ನಡಕಾವ್ಯ ಪ್ರಕಾರವಾದ 'ಚಂಪೂ' ಸಾಹಿತ್ಯ ಕಾವ್ಯಪ್ರಕಾರವನ್ನು ಗುರುತಿಸಬಹುದಾಗಿದೆ.

ಜನಪದರು ಆಶುಕವಿಗಳು ತಾವು ಕಂಡುಂಡ ಅನಭವಗಳಿಗೆ ಶಾಬ್ದಿಕ ರೂಪುಕೊಟ್ಟು, ಸಾಂಕೇತಿಕ ಅರ್ಥಬರುವಂತೆ ಕುಂತ ನಿಂತಲ್ಲಿಯೇ ಕಾವ್ಯ ಕನ್ನಿಕೆಗೆ ಜನ್ಮ ಕೊಡುವ ಅಗಾಧ ಪ್ರತಿಭಾ ಪಾಂಡಿತ್ಯವುಳ್ಳವರು. ಜನಪದಗೀತದ ಎಲ್ಲ ಪ್ರಕಾರಗಳಿಗೂ ಈ ಮಾತು ಅನ್ವಯಿಸುತ್ತದೆ. ಗೀಗೀ, ಲಾವಣಿ, ಡೊಳ್ಳಿನಂತಹ ಜನಪದ ಗೀತ ಪ್ರಕಾರಗಳು ಸಾಕ್ಷಿಯಾಗಿ ಸಿಕ್ಕುತ್ತವೆ. ಡೊಳ್ಳಿನ ಹಾಡುಗಳ ಕೊನೆಗೆ ಹಾಡು ಬರೆದ ಇಲ್ಲವೆ ಹೇಳಿದ ಕವಿಯ ಹೆಸರು ಎಲ್ಲ ಪದಗಳಿಗೂ ಕಂಡುಬರುವುದಿಲ್ಲ. ಉಳಿದ ಹಾಡುಗಳಲ್ಲಿ ಇದು ಕಡ್ಡಾಯ. ಈ ಅಂಕಿತಗಳಲ್ಲಿ ದೇವರ ಹೆಸರುಗಳೂ ಸಿಗುತ್ತವೆ. ಅದು ಕವಿಯ ಮತ್ತು ಕುರುಬ ಕುಲದ ಆರಾಧ್ಯದೇವರುಗಳಲ್ಲಿ ದೊರೆತ ಸಿದ್ಧ, ಶಿವಬಸವ, ಭರಮಣ್ಣ, ಸಿಂದೋಗಿಮರಳಣ್ಣ ಮೊದಲಾದವರು. ಇವರಲ್ಲಿ ಕುರುಬರು ಹಾಗೂ ಕುರುಬೇತರರು ಇರುವುದುಂಟು. ವ್ಯಕ್ತಿಗತವಾಗಿ ರಚನೆಗೊಂಡ ಜನದಪ ಡೊಳ್ಳಿನ ಹಾಡುಗಳು ಸಾಮೂಹಿಕವಾಗಿ ಬಳಕೆಯಾಗಿ ಬಹುಬೇಗ ಪ್ರಚಾರ ಪಡೆಯುತ್ತವೆ.

ಡೊಳ್ಳಿನ ಹಾಡು ಯಾವಾಗಲೂ ಗುರುವಿನ 'ಸ್ತುತಿ'ಯೊಂದಿಗೆ ಪ್ರಾರಂಭವಾಗುತ್ತದೆ. ಕುರುಬರಿಗೆ ಗುರುವಿನಲ್ಲಿ ಅಪಾರನಂಬಿಕೆ, ತಮ್ಮ ಸಕಲ ಅಭಿವೃದ್ಧಿಯು ಗುರುವಿನಿಂದಲೇ ಆಗುವುದೆಂಬ ನಂಬಿಕೆ ಅವರಲ್ಲಿ

ಇದ್ದಂತಿದೆ. ಆದ್ದರಿಂದ ಹಾಡಿನ ಪ್ರಾರಂಭದಲ್ಲಿ ಗುರುವನ್ನು ಭಕ್ತಿಯಿಂದ ನೆನೆಯುತ್ತಾರ. ಅಂತೆಯೇ ಪ್ರತಿಯೊಂದು ಡೊಳ್ಳಿನಹಾಡು 'ಗುರುವೆ ನಮ್ಮಯ್ಯ ದೇವsssರ್ ಬಂದಾವ್ ಬನ್ನಿರೇ' ಎಂಬ ಪಲ್ಲವಿಯೊಂದಿಗೆ ಪ್ರಾರಂಭವಾಗುತ್ತದೆ. ಎಲ್ಲಾ ಹಾಡುಗಳ ಆರಂಭಕ್ಕೂ ಈ ಪಲ್ಲವಿಯನ್ನು ಬಳಸುತ್ತಾರೆ. ತರುವಾಯ 'ಶಿವನೇ ನಮ್ಮಯ್ಯ ದೇವsssರ್ ಬಂದಾವ್ ಬನ್ನಿರೇ'[೨] ಎಂದು ಅವರು ಪಲ್ಲವಿಹಾಡುತ್ತಾರೆ.

ಹಾಡಿದ್ರ ಹಾಡಬೇಕು ಜೋಡಿದ್ರ ನಗುಬೇಕು, ಹಾಡಾ ಹಾಡಕೊಂಡ ಹೋಗಬೇಕು ಮಂತ್ರ ಮರಕೊಂತ ಹೋಗಬೇಕು ಎನ್ನುವ ಜನಪದರು ಎಲ್ಲರೂ ಹಾಡುವವರಲ್ಲ, ಯಾರೂ ಹಾಡದೇ ಇರುವವರಲ್ಲ. ತಮ ತಮಗೆ ಯಾವ ವಿಷಯ ವಸ್ತು ಇಷ್ಟವೊ ಅದನ್ನು ಮನದುಂಬಿ ಹಾಡುವ ಪ್ರವೃತ್ತಿಯನ್ನು ಹೊಂದಿದ್ದಾರೆ. ಆದರೆ ಇಂತಹ ಹಾಡುಗಾರರು ಸಿಗುವುದು ಅಪರೂಪ. ಇದಕ್ಕೆ ಅಪವಾದವೆಂಬಂತೆ ಡೊಳ್ಳುಕುಣಿತದ ಕಲೆಯಲ್ಲಿ ಪ್ರಸಿದ್ಧರಾದ ಜಾನಪದ ಪ್ರಶಸ್ತಿ ವಿಜೇತರಾದ ಬಳ್ಳಾರಿ ಜಿಲ್ಲಾ ಹಗರಿಬೊಮ್ಮಳಹಳ್ಳಿ ತಾಲೂಕು 'ಸೊನ್ನ'ದ ಗ್ರಾಮದವರಾದ ಮುದಿಮಲ್ಲಪ್ಪನವರು ಸಹ ಹಲವು ಡೊಳ್ಳಿನ ಹಾಡುಗಳನ್ನು ಹಾಡಿದ್ದಾರೆ. ಇವರು ಓದು - ಬರಹವನ್ನು ಕಲಿತವರಲ್ಲ ಆದರೂ ರಾತ್ರಿಯಿಂದ ಬೆಳಗಿನತನಕ ಹಾಡುವ ಡೊಳ್ಳಿನ ಹಾಡುಗಳ ಸೊಗಡೆ ಬೇರೆ. ತಮ್ಮದೇ ಆದ ಜನಪದ ಸೊಗಡಿನಲ್ಲಿ ಮಜಲು-ಮೇಳಗಳನ್ನು ಕಟ್ಟಿಕೊಂಡು, ಪಾರ್ವತಿ - ಪರಮೇಶ್ವರ, ಬೀರಪ್ಪ, ಕಾಮವ್ವ-ಸೂರವ್ವ, ಮಳೆರಾಯ, ಭರಮಣ್ಣ, ಕ್ಯಾಣನಬ್ಯಾಟಿ, ಜೊಳ್ಳಾಸುರನಪದ, ಕುರುಬರು ಮೊದಲಾದ ಹತ್ತು ಹಲವು ಡೊಳ್ಳಿನ ಹಾಡುಗಳನ್ನು ಹಾಡಿದ್ದಾರೆ. ಅವುಗಳಲ್ಲಿ ಕೆಲವು ಹಾಡುಗಳನ್ನು ಗಮನಿಸಬಹುದು. ಅಷ್ಟೇ ಅಲ್ಲದೆ All India Radio ಬೆಂಗಳೂರು ಹಾಗೂ All India Radio ಧಾರವಾಡ ಮತ್ತು ಆಕಾಶವಾಣಿ ಕೇಂದ್ರ ಗುಲ್ಬರ್ಗ ಹೀಗೆ ಹಲವು ಆಕಾಶವಾಣಿ ಕೇಂದ್ರಗಳಲ್ಲಿ ತಮ್ಮ ಜನಪದ ಕಂಪನ್ನು ಸೂಚಿಸಿ ಜನಪದ ಸೊಗಡಿನಲ್ಲಿ ಹಲವು ಹಾಡುಗಳನ್ನು ಹಾಡಿಬಂದಿದ್ದಾರೆ.

| | |
|---|---|
| ೧. ಸ್ತುತಿಪದ | ೮. ಕುರುಬರು |
| ೨. ಬಾಳಿ ಬದುಕಿರೆಂದು ಹರಸವ್ವ | ೯. ಕ್ಯಾಣನ ಬ್ಯಾಟಿ |
| ೩. ಬೀರೇದೇವರು | ೧೦. ಹಡಗಲಿ ಹಾಲಸ್ವಾಮಿ |
| ೪. ಮಳೆರಾಯ | ೧೧. ಈರಪ್ಪ |
| ೫. ಭರಮಣ್ಣ | ೧೨. ರೇವಣಸಿದ್ಧ |
| ೬. ಕಾಮವ್ವ-ಸೂರವ್ವ | ೧೩. ರೋಣದ ಹಾಡು |
| ೭. ದೇವಿಹಾಡು | ೧೪. ಜೊಳ್ಳಾಸುರನಪದ |

## ೧. ಸ್ತುತಿಪದ

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನೀರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನೀರೇ |
ನಿದ್ರಿ ಹೊತ್ತಿನ್ಯಾಗ ನಿಜರೂಪ ತೋರಿಸಿ ಎಬ್ಬಿಸಿ ಪದಗಳ ಹಾಡಂದ
ಯಾರ ಹಾಡಲೋ ಯಾರನು ಬಿಡಲೋ ಯಾರಿಗ್ಹೇಳಿ ಶರಣೆನ್ನಲಿ
ಯಾರಿಗೇಳಿ ಶರಣೆನ್ನಲಿ ಸ್ವಾಮಿ ನಮ್ಮ ಹಾಲುಮತದ ಗುರುವೀಗೆ
ಮೊದಲು ಗುರುವಿಗೆ ಸ್ಮರಣೆಯ ತಗದು ಸರುವರಿಗೆ ಮಾಡುವೆ ನಮ್ಮ ಶರಣ
ಬಿದ್ರು ಕೈತಳ ಡೊಳ್ಳಿಗೆ ಮೊದಲಿಗೆ ಗುರುಹಿರಿಯರಿಗೆ ಮಾಡುವೆ ಶರಣ
ವೀರಂಕಾರಿ ನಿರಹಂಕಾರಿ ಆದಿಮೂರ್ತಿಗೆ ನಮ್ಮ ಶರಣ
ನೀರ ಲಾಭವನುಸಲವೋವಂತ ಬಸವಣ್ಣಗೆ ಮಾಡುವೆ ನಮ್ಮ ಶರಣ
ಪೂರ್ವ ಪಶ್ಚಿಮ ಉತ್ತರ ದಕ್ಷಿಣ ಮೂಡಿಬರುವ ಸೂರ್ಯಗೆ ನಮ್ಮ ಶರಣ
ರಾತ್ರಿ ಕಾಲದಲ್ಲಿ ಬೆಳಕು ನಡೆಸುವಂತ ಚಂದ್ರಗೆ ಮಾಡುವೆ ನಮ್ಮ ಶರಣ
ಇಂದ್ರ ಚಂದರ ದೇವೇಂದ್ರ ಲೋಕಕೆ ಬಂದ ಸಭಿಕರಿಗೆ ಮಾಡುವೆ ನಮ್ಮ ಶರಣ

## ೨. ಬಾಳಿಬದುಕಿರೆಂದು ಹರಸವ್ವ

೧

ಯವ್ವ ಸೊನ್ನದ ಸೊಲ್ಲವ್ವ
ಬೀಳಭೂಮಿನಾ ಚಲೋ ಭೂಮಿ ಮಾಡ್ದೆವ್ವ
ನಮ್ಮನ್ನ ನೀ ಹರಸಿ ಕಳಿಸವ್ವ

೨

ನಮ್ಗೆ ಆರ್ಶೀವಾದ ಮಾಡ್ದೆವ್ವ
ಹಂಪಿಯಿಂದ ಡೆಲ್ಲಿಗೆ ಕಳ್ಸಿದವ್ವ
ಹೆಸ್ರುಗಳ್ಸಿ ಕಲೆ ಉಳ್ಸಿ ಬಾ ಅಂದೆವ್ವ

೩

ಗೇಣು ಇದ್ದುದು ಮೊಳ ಮಾಡ್ದೆವ್ವ
ಬೆಂಗಳೂರು ಮೈಸೂರುನ್ಯಾಗ ನಮ್ಮ ಕುಣ್ಸಿದವ್ವ

೪

ನಿನ್ನ ಧ್ಯಾನದಾಗ ನಾವು ಬಾಳ್ವಿ ಮಾಡುತ್ತಿವ್ವ
ಪರದೇಶಕ ನಮ್ಮ ಕಲೆ ತೋರ್ಸುತ್ತವ್ವ
ಕೈ ಹಿಡ್ದು ನಮ್ಮ ನಡೆಸವ್ವ
ಬಾಳಿ ಬದುಕಿದರೆಂದು ಹರಸವ್ವ

## ೩. ಬೀರೇದೇವರು

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ |
ಆದಿತ್ಯವಾರ ಉದಯಕೆ ನಾವೆದ್ದು ಅರಸಿನ ಬಳಿಗೆ ಬಂದೇವೋ
ಅರಸನ ಬಳಿಗೆ ಬಾರಲಿಕ್ಕೆ ನಾವಂಜೇವಪ್ಪ ನಾವಳಿಕೇವೋ
ಅಂಜಿ ಅಳಿಕಿ ನಿನ್ನಂಗಳ ಹೊಕ್ಕೆವು ಅಯ್ಯೋ ಚೋಜಿಗವ ಕಂಡೇವೋ
ಅಯ್ಯೋ ಚೋಜಿಗದದೇನು ಕಂಡೇವು ಸುತ್ತು ಪೌಳಿಯ ಕಂಡೇವೋ
ಸುತ್ತು ಪವುಳಿಯ ಕಂಡೇವಪ್ಪ ನಾವ್ಹೆಚ್ಚಿನಲಿಂಗ ಕಂಡೇವು
ಹೆಚ್ಚಿನ ಲಿಂಗಕೆ ನೋಡಲ್ಲಪ್ಪ ಮುತ್ತು ಮಲ್ಲಿಗೆ ದವನಾವೋ
ಮುತ್ತು ಮಲ್ಲಿಗಿ ದವನದ ಮುನಿಯ ಸೂರ ನಿನ್ನ ಕಂಡೇವೋ
ಮುನಿಯ ಸೂರ ನಿನ್ನ ಮುಂಡಿಯ ಮೇಲೆ ಕೀಲಿ ಕೀಲಿ ಕಿರಿ ಜಡಿಯೋಳೋ
ಕೀಲಿ ಕೀಲಿ ಕಿರಿ ಜಡಿಗಳನ್ನೆಲ್ಲ ಹಿಂಜಡಿ ಮಾಡಿ ಕಟ್ಟಿದನೋ
ನಿಂತನಪ್ಪ ಸುರಿ ಮಂಡಲನೆಲ್ಲ ಕಟ್ಟೆನಪ್ಪ ಸುರಿಮಂಡಲನೇ
ಕಟ್ಯಾನಪ್ಪ ಸುರಿ ಮಂಡಲನೆಲ್ಲ ಸತ್ತಿಗಿ ನೆರಳಿಗೆ ನಿಂತಾನೆ
ಸತ್ತಿಗಿ ನೆರಳಿಗೆ ನಿಂತಿರು ದೇವರು ಭಕ್ತರು ಕರೆದರೆ ಓವನ್ನು
ಭಕ್ತರು ಕರೆದರೆ ಓವನ್ನೋದೇವರು ಒಕ್ಕಲು ಮೆಟ್ಟಿದ ಅಗಿಸ್ಯಾಗೋ
ಒಕ್ಕಲುಮೆಟ್ಟದ ಅಗಸ್ಯಾಗೋ ನಗ ದಾಳಿಂಬರ ವನದಾಗೇ
ನಗ ದಾಳಿಂಬರ ವನದಾಗಪ್ಪ ದೇವಿ ದೇವರ ಸಭದೇಳು
ದೇವಿಯೆಂದರೆ ಯಾರೇಳೋ ದೇವರೆಂದರೆ ಯಾರೇಳೋ
ದೇವಿಯೆಂದರೆ ಪಾರ್ವತಿದೇವಿ ದೇವರೆಂದರೆ ಪರಮೇಶ್ವರನೋ
ಪರಮೇಶ್ವರ ನಮ್ಮ ಬ್ರಹ್ಮಲಿಂಗನು ಶಸ್ತ್ರಮುಖದ ಬೀರಣ್ಣನೋ
ದೇವರು ಬಂದಾವು ಬನ್ನಿರೇ ||

## ೪. ಮಳೆರಾಯ

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ
ಮಳಿಗಾಳಿಗಳಿಲ್ಲದೆ ಮಾಡುಗಳೆದ್ದವು ಸುಳಿಗಾಳಿಲ್ಲದೆ ತಿರುಗ್ಯಾವು
ಸುಳಿಗಾಳಿಲ್ಲದೆ ತಿರುಗ್ಯಾವಲ್ಲೊ ವಜ್ಜರದ ಕೀಲ ಸಡಿಲ್ಯಾವು
ವಜ್ಜುರದ ಕೀಲ ಸಡಿಲ್ಯಾವಲ್ಲೊ ಬಿದ್ದನಪ್ಪ ಮಳಿದೇವನೊ
ಬಿದ್ದನಪ್ಪ ಮಳಿದೇವನಲ್ಲೊ ಗುಡ್ಡಗಳೆಲ್ಲ ಹಸುರಾಗ್ಯಾವೊ
ಗುಡ್ಡಗಳೆಲ್ಲ ಹಸುರಾಗ್ಯಾವಲ್ಲೊ | ಬಸವನ ಬಣ್ಣಕೆ ಬಂದಾನೊ
ಬಸವನ ಬಣ್ಣಕೆ ಬಂದಾನಲ್ಲೊ ಬಿತ್ತುಬೀಜ ಜತುನಾದವೊ
ಸೆಡ್ಡಿ ಬಟ್ಟಲ ಶರಕ್ಕೆಮಿಣಿಯೇ ಎಡಿನೊಗ ಇಟ್ಗೊಂದಾಮ್ಯಾನೊ
ಎಡಿನೊಗ ಇಟ್ಗೊಂದ ಮ್ಯಾನಲ್ಲೊ | ಕೂರಗಿ ಪೂಜಿ ಮಾಡ್ಯಾನೊ
ಹುಡಿಯಲಿ ಹುಡಿಬೀಜ ಹಿಡಿಯಲಿ ಹಿಡಿಬೀಜ ಹೊಡಿವ ಬಾರಿಕೋಲು ಹೆಗಲಲ್ಲೊ
ಹೊಡೆವ ಬಾರಿಕೋಲು ಹೆಗಲಲಿ ಹಾಕಿಕೊಂಡು ಜಳಜಳಬೀಜವ ಬಿಟ್ಟಾನೊ
ಹಂಡ ಎತ್ತಿನ ಹಗ್ಗವ ಹಿಡಿದು ಗುಂಡ ಎತ್ತಿನೊಂಡೊಡಿದಾನೊ
ಗುಂಡ ಎತ್ತಿನೊಂದೊಡಿದಾನಲ್ಲೋ ಜಳಜಳ ಬೀಜವ ಬಿತ್ತ್ಯಾನೊ
ಹಸಿ ಮಣ್ಣಿನಾಗ ಸಸಿನಾಟಿ ಬರುವಾಗ ಹಸನಾಗಿ ಬೆಳಿಯೊ ಭೂಮ್ಯಾವ್ವಾ
ಹಸನಾಗಿ ಬೆಳಿಯೊ ಭೂಮ್ಯವ್ವ ನಿನ್ನ ಹಸರಂತ ಕಾಲಂದಾಡ್ಯಾವೊ
ಹಾಲುತುಂಬಿ ಹದ ಮೀರಿದ ಬಳಿಕ ಹಾಲು ತುಪ್ಪ ಚಲ್ಯಾಡ್ಯಾವೊ
ನಾಲ್ಕು ಮೂಲಿಗೆ ಮಂಚಿಗಿ ಹಾಕಿ ಕೌಣಿಲಿ ಗುಬ್ಬಿ ಕಾದನೊ
ಕುಡಗೋಲು ತಗೊಂಡು ಬಡುಮಟ ಕೊಯ್ದನು ಹಿಡಿಹಿಡಿ ಸಿವುದೊಂದು ಈ ಡಾಡ್ಯಾನೊ
ಹಿಡಿಹಿಡಿ ಸಿವುದೊಂದೀಡ್ಯಾಡ್ಯನಲ್ಲೊ ಚೆಂಡಿಕಟ್ಟಿ ಗೂಡಾಕ್ಯಾನೋ
ಕಣಗಳ ಮಾಡಿ ತೆನಿಗಳ ಮುರಸಿ ಸುತ್ತ ಕಣಕೆ ದಿಂಡ ಕಟ್ಟ್ಯಾನೊ
ತೆನಿಯಾದು, ಕಡಿಯಣ್ಣ ಕಣಕಾದು, ಹರುವಣ್ಣ ರೂಲನಾದರ ಹೂಡ್ಯಾನೊ
ರೂಲನಾದರೂ ಹೂಡ್ಯಾನೊ ಒಕ್ಕಲಿಗ ಹಾಡ್ಯಾಡಿ ರೂಲ ಹೊಡದಾನೋ
ಹಾಡ್ಯಾಡಿ ರೂಲ ಹೊಡದಾನೋ ಒಕ್ಕಲಿಗ ಹುಲಿಗ್ಯನಂದು ರೂಲ ಬಿಟ್ಟಾನೊ
ರೂಲನಾದರೂ ಬಿಟ್ಟಾನೊ ಒಕ್ಕಲಿಗ ಕಂಕಿನಾದರೂ ಎಳದಾನೊ
ಕಂಕಿನಾದರೂ ಎಳದಾನೊ ಒಕ್ಕಲಿಗ ಸುಂಕದರಾಸಿ ಕಟ್ಯಾನೊ
ಮೂರುಕಾಲಿನ ಮೆಟ್ಟವನಾಕಿ ಸುಂಕದ ರಾಶಿ ತೂರ್ಯಾನೊ

ಸುಂಕದರಾಶಿ ತೂರ್‍ಯಾನಲ್ಲೋ ರಾಸಿ ತುಂಬಿ ಮೇಟಿಗಾಕ್ಯನೊ
ರಾಸಿ ತುಂಬಿ ಮೇಟಿಗಾಕ್ಯಾನೊ ಒಕ್ಕಲಿಗ ಮೋಜು ಮಾಡಿರಾಸಿ ಕಟ್ಟ್ಯಾನೊ
ಮೊಜಮಾಡಿರಾಸಿ ಕಟ್ಟ್ಯಾನೊ ಒಕ್ಕಲಿಗ ಪೂಜಿಮಾಡಿ ಎಡಿ ಹಿಡಿದಾನ
ಪೂಜಿಮಾಡಿ ಎಡಿಹಿಡಿದಾನ ಒಕ್ಕಲಿಗ ರಾಸಿಯಾದರೂ ಮೊಗಚಿದನೋ
ರಾಸಿಯಾದರೂ ಮೊಗಟ್ಯಾನ ಒಕ್ಕಲಿಗ ಒಕ್ಕಲಿಗರಾಸಿ ತುಂಬಿ ಬಂಡಿಗಾಕ್ಯಾನೊ
ರಾಸಿತುಂಬಿ ಬಂಡಿಗಾಕ್ಯನೊ ಒಕ್ಕಲಿಗ ಬಸವಣ್ಣನ್ನೂಡಿ ರಾಸಿ ತಂದಾನೊ
ಬಸವಣ್ಣಗಿಂತ ಬಲ್ಲಿದವನ್ಯಾರೊ ಶಿವನಿಗಿಂತ ದೊಡ್ಡವನ್ಯಾರೊ
ಶಿವನಿಗಿಂತ ಶಿವಶರಣರಧಿಕರೆಂಬ ಶರಣರಡಿಗೆ ನಾನು ವಂದಿಸುವೆ
ಉತ್ತಮರಾದ ಉಲ್ಪತ್ತಿ ಈರಗಾರು ಮುತ್ತಿನಂಥ ಪದಹಾಡಿದರು
ಹಾಡಿ ಹಾಡಿಕೊಂತೋದರೆ ಗುರುವೆ ಬೇಗುಂಟು ಬೆಳಗಾದಾವೆ
ಇಲ್ಲಿಗೆ ಇದು ಬಂದು ಸಂದೇಳು ಗುರುವೆ ಹಾಡಿದರು ಪದ ಮುಂದೇಳು
|| ಸ್ವಾಮಿ ||

## ೫. ಭರಮಣ್ಣ

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ |
ದುಮ್ಮಿನಾಳು ಭರಮಣ್ಣನಪ್ಪ ಸುಮ್ಮಾನು ಬರುವನಲ್ಲೇಳು
ಆಡಮಕ್ಕಳ ಅಳಿಸ್ಯಾನ ಭರಮಣ್ಣ ಓದ ಮಕ್ಕಳ ಕೆಡಿಸ್ಯಾನ
ಓದ ಮಕ್ಕಳ ಕೆಡಿಸ್ಯಾನ ಭರಮಣ್ಣ ಮುಂದಕ ಸಾಗಿ ಬಂದಾನ
ಮುಂದಕ ಸಾಗಿ ಬಂದಾನ ಭರಮಣ್ಣ ಒಬ್ಬ ಸ್ತ್ರೀಯಳ ಕಂಡಾನ
ಒಬ್ಬ ಸ್ತ್ರೀಯಾಳ ಕಂಡಾನ ಭರಮಣ್ಣ ಲಗ್ಗಣಾಗಬೇಕಂದಾನ
ಅಂಗಳದಾಗ ಆಡುವ ತಂಗಿ ಸೂರವ್ವನ ಅಂಗೈಗೆರಿಗಳ ನೋಡ್ಯಾರ
ಒಂಟಿಯ ಸುಳಿಯೊ ಗಂಟಿಯ ಮುತ್ತೊ ಸಂತವುಗಳ್ಳ ಹೆಣ್ ಅಂದಾರ
ಸಂತವುಳ್ಳ ಹೆಣ್ಣಂದಾರ ನಮ್ಮ ಭರಮಗ ದಗ ಮಾಡಿ ತಗದಾರ
ಹಸಿಯೊ ಜಗಲೊ ಹಾಲುಗಂಬ ಗಗನಕ ಚಂದ ಹಂದರ
ಗಗನಕ ಚಂದವ ಹಂದರದಡಿಯಲೆ ಭರಮನ ಮದುವಿ ಮಾಡ್ಯಾರ
ಅದು ಎಲಿ ಹೋಳಿಗೆ ಸ್ವಾರಿಯಲ್ಲಿ ಬಾನ ಮ್ಯಾಲೆ ನೊರಿಹಾಲು ಸುರಿಮಾಲೆ
ಮ್ಯಾಲೆ ನೊರಿಹಾಲು ಸುರಿಯಲಪ್ಪ ತಂಗಿ ಸೂರವ್ವನ ಭೂಮಾತ
ಐದಮಂದಿ ಸ್ತ್ರೀಯರ ನೀವು ಆರತಿ ಮಾಡೇಳಂದಾರ

ಐದಮಂದಿ ಸ್ತ್ರೀಯರ ಕೂಡಿ ಆರತಿ ಮಾಡಲ್ಹಿಟ್ಟಾರ
ಏಳು ಏಳು ತಂಗಿ ಸೂರವ್ವ ಆರತಿ ಮಾಡೇಳಂದಾರ
ಆಗ ನೋಡು ತಂಗಿ ಸೂರವ್ವ ಸೂರ್ಯಚಂದ್ರಗ ಬೆಳಿಗ್ಯಾಳ
ಸೂರ್ಯಚಂದ್ರಗ ಬೆಳಗಿದಳವ್ವ ಸೂರ್ಯಚಂದರ ನಿನ್ನೊಡಿಯಾನ ?
ಸೂರ್ಯನಕ್ಕಿಂತ ಬೆಳಕ್ಯಾರವ್ವ ಚಂದರಗಿಂತ ಖಳಯಾರ
ಚಂದರಗಿಂತ ಖಳ ಆದ ಪುತ್ರನ ಕೊಡು ಅಂಥನಾ ಬೇಡಿದೆನ
|| ಸ್ವಾಮಿ ||

## ೬. ಕಾಮವ್ವ - ಸೂರವ್ವ

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ ||
ಒಣಕಿಗೆ ಹುರಿಗೆಜ್ಜಿ ರ್‍ಯಾವಳ ಬಿಗಿದಾಗ ಮರಕೆ ಮುತ್ತಿನ ಜಲ್ಲೇಳು
ಮರಕೆ ಮುತ್ತಿನ ಜಲ್ಲೇಳು ಬಿಗಿದವು ಸುವ್ವೆ ಸುವ್ವೆಂದು ಪಾಡ್ಯಾಳೆ
ಸುವ್ವೆ ಸುವ್ವೆಂದು ಪಾಡೊ ಬಾಲಿಗೆ ಅತ್ತಿಗೆ ನಾದಿನಿ ಒದ್ದಾಳೆ
ಯಾಕವ್ವ ಯಾಕ ಅತ್ತಿಗೆ ಬಾಲಿ ನಾ ಮಾಡಿದ ತಪ್ಪೇನೇಳೆ
ಎನ್ನ ತಮ್ಮ ಎನ ಚೆನ್ನಿಗ ಬೀರ ಮುಂಗೈಗೆ ಬಳಿಯ ಇಡಿಸ್ಯಾನೆ
ನನ್ನ ತಮ್ಮನ ಪುಣ್ಯವನುಂಡು ನಿಮ್ಮಾ ತಮ್ಮನೊಂದಾಡುವಳು
ನನ್ನೇಳು ಬಳಗದ ಪುಣ್ಯವನುಂಡು ನಿನ್ನೇಳು ಬಳಗವೊಂದಾಡುವಳು
ನಮ್ಮಪ್ಪ ಬಳಗದ ಪುಣ್ಯವನುಂಡು ನಿಮ್ಮಪ್ಪ ನೊಂದಾಡುವಳು
ನಮ್ಮವ್ವನ ಬಳಗದ ಪುಣ್ಯವನುಂಡು ನಿಮ್ಮವ್ವ ನೊಂದಾಡುವಳು
ಯಾಲಕ್ಕಿ ಥಳಸುತ ಮ್ಯಾಲೆ ತಾನಿಡುವುತ ಬಾಲಕ ಮ್ಯಾಲೊಂದಾಡುವಳು
ಅಕ್ಕಿಯ ಥಳಸುತ ಸಿಕ್ಕನ್ನು ಪಾಡುತ ಚಿಕ್ಕಮೈದುನರ ಮ್ಯಾಲೆ ಹಾಡುವಳು
ಅರಿಷಣ ಅರಹುತ ಪುರುಷಾಂಗ ನೇಳುತ ಪುರುಷರ ಮ್ಯಾಲೆ ಹಾಡುವಳು
ಅಂಕಣ ಅರಹುತ ಕುಂಕುಮ ಸೋಸುತ ಕಂಕಣ ಕೈಡಣಲ್ ಆಡ್ಯಾಳೆ
ಚದರಿ ಕಾಮವ್ವ ನಿನ್ನ ನಿರಿಗೆಲ್ಲ ಬಣ್ಣಾವು ಪದರಿ ಪದರಿಗೆಲ್ಲ ಕ್ಯಾದಿಗಿ
ಕನ್ಯ ಕಾಮವ್ವ ನಿನ್ನ ತುರುಬುಗಂಟಿನ ಮ್ಯಾಲೆ ಮುನ್ನೂರು ಅರವತ್ತು ಕ್ಯಾದಗಿ
ಬಳಕುವ ನಡಿಗೆಗೆ ಲಳಿಕೆಯ ಒಡ್ಡಣಿಗೆ ಕಲಕ ಕಟ್ಟಿನ ಕಾಲುಂಗರವೆ
ಬಾಗುವ ನಡವಿಗೆ ತೂಗುವ ಹುವ್ವಾಲೆ ನಾಗರ್‍ಹೆಡಿಯ ಚಿಂತಾಕವೆ
ಹಸನುಳ್ಳ ಹೆಣ್ಣಿಗೆ ಕುಸಲಾದ ಮೂಗುತಿ ನಸುಳಗೆಂಪಿನ ಮಣಿಸರದ
ಗಂಜಿಯ ಸೀರೊ ಗಂಧದ ಇಳೇವು ಮಡದಿ ಮಂಚಕೆ ಬರುವಳು

ಮಡದಿ ಮಂಚಕೆ ಬರುವ ಸೂರವ್ವನ ಕಂಚಿನ ಗಂಟಿ ಕೋಲೊಯ್ದಾವೆ
ಹಿಂಗೇಳಪ್ಪ ನಮ್ಮ ಗುರುವಿನ ಮುಂದೆ ಸಂದಿಸಂದಿನ ನುಡಿಗಾಳೆ
ಸಂದಿಸಂದಿನ ನುಡಿಗಳು ಕೇಳಂಥ ತಂದಿ ಮಾಳಿಗರಾಯನೆ
|| ಸ್ವಾಮಿ ||

## ೭. ದೇವಿಹಾಡು

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ |
ಕೂಸನು ಹೊತ್ತಾಳೆ ಗುಲ್ಪುಟ್ಟಿ ಹೊತ್ತಾಳೆ ತಾನೊಂದು ರೂಪವು ತಾಳ್ಯಾಳೆ
ತಾನೊಂದು ರೂಪವು ತಾಳ್ಯಾಳೆ ಊರವ್ವ ಊರೆಲ್ಲ ಭಾಳೇವು ಹೊಂಟಾಳೆ
ಎಳ್ಳೇನು ಕಾಯಂಗ ಕಳುಬಾವು ಹರದಾವು ಒಳ್ಳೊಳ್ಳರಿಗೆ ಒಲುದಾಳ
ಒಳ್ಳೊಳ್ಳರಿಗೆ ಒಲುದಾಳ ಊರವ್ವ ಮಲ್ಲಿಗೆ ಕ್ವಾಣನ ಬಿಡಿಸ್ಯಾಳೆ
ಎಸರೇನು ಕಾಯಂಗ ಹಸುಬಾವು ಹರಿದಾವು ಹಸುಮಕ್ಕಳಿಗೆ ಒಲುದಾಳ
ಹಸುಮಕ್ಕಳಿಗೆ ಒಲುದಾಳ ಊರವ್ವ ಮಸುಳೆಯ ಕ್ವಾಣನ ಬಿಡಿಸ್ಯಾಳ
ಆರುಕಾಲಿನೇಣಿ ಹತ್ಯಾಳ ಊರವ್ವ ಹಾರಿ ನೋಡ್ಯಾಳ ಊರ ಗೌಡನ
ಹಾರಿ ನೋಡ್ಯಾಳ ಊರಗೌಡನ ಮನಿಯಾಗ ಆರತಿ ಮತ್ಯಾಕ ತಡದಾವ
ಹನ್ನೆರಡು ವರುಷದ ಎಣ್ಣುಂಡ ಕ್ವಾಣನ ಸಣ್ಣ ಮಿಣೆಯಾಕಿಡಿರಂದಾಳ
ಇಪ್ಪತ್ತುವರುಷದ ತುಪ್ಪುಂಡ ಕ್ವಾಣನ ಜತ್ತಿಮಿಣೆಯಾಕಿಡಿರಂದಾಳ
ಜತ್ತಿಮಿಣೆಯಾಕಿಡಿರಂದಾಳ ಉರವ್ವ ಎತ್ತ್ಯಾಕಿ ಕೊರಳ ಕೊಯ್ಸಾಳ
ಎತ್ತ್ಯಾಕಿ ಕೊರಳ ಕೊಯ್ಸಾಳ ಊರವ್ವ ನೆತ್ತರದೋಕಳಿನಾಡ್ಯಾಳ
ನೆತ್ತರದೋಕಳಿ ನಾಡ್ಯಾಳ ಊರವ್ವ ಛತ್ತರಿ ನೆರಳಾಗ ನಿಂತಾಳ
ಛತ್ತರಿ ನೆರಳಾಗ ನಿಂತಿರ ಊರವ್ವ ಭಗತರು ಕರೆದಾರು ಓ ಎನ್ನೆ
ಭಗತರು ಕರೆದಾರು ಓ ಎನ್ನಲಿಲ್ಲೊ ತಪ್ಪಿಸಿಕೊಂಡವು ದೇವರು
ಒಗದಾಳು ಎಂಬ ವನದಾಗಪ್ಪ ದಾಳಿಂಬರದ ಗೊನಿಯಾಗ
ದಾಳಿಂಬರದ ಗೊನಿಯಾಗಪ್ಪ ದೇವಿ ದ್ಯಾವರ ಶಬ್ದವು
ದೇವಿ ಎಂದರೆ ಯಾರೇಳಪ್ಪ ದ್ಯಾವರಂದರ ಯಾರೇಳು
ದೇವಿ ಎಂದರೆ ಪಾರ್ವತದೇವಿ ಶಾಸ್ತ್ರ ಮುಖಿಕ್ಕ ಊರವ್ವನ
ದೇವರೆಂದರೆ ಪರಮೇಶ್ವರನು ಶಾಸ್ತ್ರಮುಖಿಕ್ಕ ಬೀರಣ್ಣನ
ಇಲ್ಲಿಗೆ ಹರಹರ ಇಲ್ಲಿಗೆ ಶಿವಶಿವ ಇಲ್ಲಿಗೆ ಇದು ಒಂದು ಸಂದೇಳು
|| ಸ್ವಾಮಿ ||

## ೮. ಕುರುಬರು

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ |
ಏಣೆಯ ಕಲ್ಲೊ ಸುಣ್ಣದ ಗುಡಿಯೊ ದೊಡ್ಡ ವಾಡಿಯನ ಭಂಡಾರ
ದೊಡ್ಡವಾಡಿಯನ ಭಂಡಾರಂದೇಳಿ ಮಂಡೀಲೆ ಒಪ್ಪಿಗೊಂಡಾನ
ಮಂಡಿಲು ಒಪ್ಪಿಗೊಂಡಾನ ನಿಂಗಣ್ಣ ಕುರಿಯ ಹಿಂಡಿಗೆ ಹೋಗ್ಯಾನ
ಕುರಿಯ ಹಿಂಡಿಗೆ ಹೋದಾನಪ್ಪ ಆಳಮಲ್ಲನ ಕರದಾನ
ಆಳಮಲ್ಲನ ಕರದಾನಪ್ಪ ಮುಂದಲ ಮರಿಗಳು ಜ್ವಾಕಿನ
ಮುಂದಲ ಮರಿಗಳು ಜ್ವಾಕಿ ಮಲ್ಲಣ್ಣ ಹಿಂದಲ ಮರಿಗಳು ಜತನಾವ
ಹಿಂಡ ಕುರಿಗಳ ಹಿಂಡು ಮಲ್ಲಣ್ಣ ಹಾಕ ಮರಿಗಳ ಹಾಕಯ್ಯ
ಹಾಲೊಂದು ಕಾವಡಿ ಕರೆದಾನ ಮಲ್ಲಣ್ಣ ಗಿಣ್ಣೊಂದು ಕಾವಡಿ ಕರದಾನ
ಹಾಲುಗಿಣ್ಣವ ಹೊತ್ತುಗೊಂಡು ಸುಮ್ಮನ ಮನಿಗೆ ಬಂದಾನ
ಮನಿಯಾಗ ನೋಡು ತಾಯಿಮಾಕವ್ವ ಏಳು ಕೊಪ್ಪರಗಿ ನೀರಕಾಸ್ಯಾಳ
ಹುಟ್ಟೊಂದು ಸಿಂಗಾರನಾಗ್ಯಾನ ನಿಂಗಣ್ಣ ಉಂಡೊಂದು ಸಿಂಗಾರನಾಗ್ಯಾನ
ಡೊಳ್ಳಿನೀರನ ಕರಿಸ್ಯಾನ ನಿಂಗಣ್ಣ ಡೊಳ್ಳ ಕೈಯಲ್ಲಿ ಕೊಟ್ಟಾನ
ತಾಳದೀರನ ಕರಿಸ್ಯಾನ ನಿಂಗಣ್ಣ ತಾಳ ಕೈಯಲ್ಲಿ ಕೊಟ್ಟಾನ
ಕೊಳಲ ಈರನ ಕರಿಸ್ಯಾನ ನಿಂಗಣ್ಣ ಕೊಳಲ ಕೈಯಲ್ಲಿ ಕೊಟ್ಟಾನ
ಈ ಬತ್ತಿ ಪಟ್ಟನ ಈರನ ಕರಸ್ಯಾನ ಪಟ್ಟದ ದಟ್ಟಿಲುಡಿಸ್ಯಾನ
ನಿಶಾನಿ ಈರನ ಕರಿಸ್ಯಾನ ನಿಂಗಣ್ಣ ನಿಶಾನಿ ಏರಿಸಿರಂದಾನ
ಇಷ್ಟಮಂದಿ ಈರರು ಕೂಡಿ ಎಣಿಕಲ್ಲಪ್ಪಗ ನಡದಾರ
ನೂರೊಂದು ಈರರ ಕೂಡಿದ ಬೈಲಾಗ ಹಾಡಂದಾರ ನಿಂಗಣ್ಣನ
ಹಾಡಲಾರೆನೊ ಹರಸಲಾರೆನೊ ಬೇಡಲಾರೆನೊ ನಿಮ ಚಾಜವನು
ಬೇಡಲಾರೆನೊ ನಿಮ ಚಾಜವನೆಂದು ಗುಡಿಯ ಹಿಂದಕೆ ನೋಡ್ಯಾನ
ಗುಡಿಯ ಹಿಂದಕ ನೋಡ್ಯಾನಪ್ಪ ಅಡಿ ಮಗ್ಗಲ್ಹಚ್ಚಲ್ಲಿ ಒರಗ್ಯಾನ
ಆಗನೋಡು ಎಣಕಲ್ಲಪ್ಪ ಈರರ ಗೆಣಿತಾನ ಆದಾನ
ಸಾವಿರ ಮಂದಿ ಐದಾರ ನಮ್ಮ ಸರದಾರ ನಿಂಗಣ್ಣ ಇಲ್ಲಾರ
ಸರದಾರ ನಿಂಗಣ್ಣ ಇಲ್ಲವೆಂದ್ಹೇಳಿ ಗುಡಿಯ ಹಿಂದಕ ನೋಡ್ಯಾನ
ಗುಡಿಯ ಹಿಂದಕ ನೋಡ್ಯಾನಪ್ಪ ಅಡಿಮಗ್ಗಲ್ಹಚ್ಚಲ್ಲಿ ಒರಗ್ಯಾನ

ಮನಿಯ ಮಗನೆಂದು ಬಂಡಾರಕೊಟ್ಟಾರ ಮಲಗಾಕ ಬಂದೇನೋ ನಿಂಗಣ್ಣ
ವರವಿನ ಮಗನೆಂದು ಬಂಡಾರ ಕೊಟ್ಟಾರ ಒರಗಾಕ ಬಂದೇನೋ ನಿಂಗಣ್ಣ
ಬಂಡಾರಂದೆತಿ ಬಂದೆ ನಮ್ಮಪ್ಪ ಬಂಧನ ಬರುವುದು ಅರಿಯೇಳ
ಬಂಧನ ಬರುವುದು ಕೇಳಿದರ ನಾನು ಉಂಡುಂಡು ಮನಿಯಾಗ ಇರುವೇನ
ಹಾಲು ಬಾನವ ಉಂಡು ನನ್ನಪ್ಪ ಹಸುಮಂಚದ ಮೇಲೆ ಮನಗ್ಯಾನ
ತುಪ್ಪ ಬಾನವ ಉಂಡು ನನ್ನಪ್ಪ ಸುಪ್ಪತ್ತಿಗೆ ಮ್ಯಾಲೆ ಮನಗ್ಯಾನ
ನಾಲಿಗೆ ತಗಿಯೋ ಲಕ್ಷಣಗೇಡಿ ಗಂಟಿ ಅಕ್ಷರ ಒಡದಾನ
ನಾಲಿಗೆ ತಗದಾನ ಲಕ್ಷಣಗೇಡಿ ಗಂಟಿ ಅಕ್ಷರ ಒಡದೇನೆ
ಹಾರರ ಅರಿದರ ಮಕ್ಕಳು ಬಿಳಿಕಾಗದ ಮ್ಯಾಲೆ ಓದ್ಯಾರೆ
ತುರುಕರು ಬಾಬಣ್ಣನ ಮಕ್ಕಳು ಮುಸ್ತಾಪದ ಮ್ಯಾಲೆ ಓದ್ಯಾರೆ
ಕುರುಬರ ಬೀರಣ್ಣನ ಮಕ್ಕಳು ನಾಲಿಗೆ ಮ್ಯಾಲೆ ಓದ್ಯಾರೆ
ಬಟ್ಟಿನೋಟು ಬಂಡಾರ ಕೊಟ್ಟರ ಬೆಟ್ಟ ಇಳಿದು ನಾವು ಬರುವೆವು
ಕಾಸಿನೋಟು ಬಂಡಾರ ಕೊಟ್ಟರ ದೇಶಬಿಟ್ಟು ನಾವು ಬರುವೆವು
|| ಸ್ವಾಮಿ ||



## ೯. ಕ್ವಾಣನ ಬ್ಯಾಟಿ

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ |
ಮುಂಜಾನೆ ಎದ್ದಾನ ಜೀನರಣ್ಣ ಹೂವಿನ ತ್ವಾಟಕ ಹೋಗ್ಯಾನ
ಹೂವಿನ ತ್ವಾಟಕ ಹೋಗ್ಯಾನ ಜೀನರಣ್ಣ ತ್ವಾಟದ ಬಾಗಿಲು ತಗದಾವು
ಯಾವ ದೇಶದ ಕ್ವಾಣ ಬಂದು ಗಂಧದ ಮಡುವ ಕೆಡಿಸ್ಯೆತಿ
ಗಂಧದ ಮಡುವ ಕೆಡಿಸ್ಯೆತಿ ಕ್ವಾಣ ಹೂವಿನ ವನವ ಬಡದ್ಯೆತಿ
ಹೂವಿನ ವನವ ಬಡದ್ಯೆತಿ ಕ್ವಾಣ ಮಲ್ಲಿಗಿ ಗಿಡದಡಿ ಮಲಗ್ಯೆತಿ
ಮಲ್ಲಿಗಿ ಗಿಡದಡಿ ಮಲಗಿರೋ ಕ್ವಾಣನ್ನ ಕೊಲ್ಲುವರು ಯಾರಿಲ್ಲೇಳು
ಕೊಲ್ಲುವರು ಯಾರಿಲ್ಲವೆಂದ್ಹೇಳಿ ಒಡೆಯನ ಬಳಿಗೆ ಹೋಗ್ಯಾನ
ಬಾರೊ ಬಾರೊ ಏನಮ್ಮಪ್ಪ ಏನೇನು ಕೇಡುಗಳಾಗ್ಯಾವ
ಯಾವ ದೇಶದ ಕ್ವಾಣ ಬಂದು ಗಂಧದ ಮಡುವ ಕೆಡಿಸ್ಯೆತಿ
ಗಂಧವ ಮಡುವ ಕೆಡಿಸ್ಯೆತಿ ಕ್ವಾಣ ಹೂವಿನ ವನವ ಬಡಿದ್ಯೆತಿ
ಹೂವಿನ ವನವ ಬಡಿದ್ಯೆತಿ ಕ್ವಾಣ ಮಲ್ಲಿಗಿ ಗಿಡದಡಿ ಮಲಗ್ಯೆತಿ





ಅಂಜನದೇವಿ ಮಗ ಹನುಮಂತ ಕ್ವಾಣನ ಧಾಳಿ ಹೋಗ್ತ್ವೇಳು
ಎಲ್ಲಿಗಾದರೆ ಹೋದೆನು ಸ್ವಾಮಿ ಅಲ್ಲಿಗೆ ನಾನು ಒಲ್ಲ್ವೇಳು
ಜೋಡೆರಡು ಕಾಶಿ ಈರಭದ್ರ ನೀನು ಕ್ವಾಣನ ದಾಳಿ ಹೋಗ್ತ್ವೇಳು
ಎಲ್ಲಿಗಾದರೂ ಹೋದೆನು ಸ್ವಾಮಿ ಅಲ್ಲಿಗೆ ನಾನು ಒಲ್ಲೇಳು
ಏಸು ಮಕ್ಕಳಿದ್ದೇನು ಮಾಡಬೇಕು ವ್ಯಾಸದ ಮಗ ಒಬ್ಬಿಲ್ವೇಳು
ವ್ಯಾಸದಮಗ ಒಬ್ಬಿಲ್ಲವೆಂದ್ವೇಳಿ ದುಃಖಿಸಿ ಕಣ್ಣೀರ ತಂದಾನ
ಜೋಡೆರಡು ಅಲಗೀಲೆ ಕುರುಬರ ಬೀರಣ್ಣ ಕ್ವಾಣನ ದಾಳಿ ಹೋಗ್ತ್ವೇಳು
ತಂದಿ ಹೇಳಿದ ಮಾತಿಗೆ ಮಗನ ಮೀರುವುದಿಲ್ವೇಳು
ಮಗನೇ ಮೀರುವುದಿಲ್ಲವೆಂದ್ವೇಳಿ ತಬಕೀಲೆ ವೀಳ್ಯವ ಹಿಡಿದಾನ
ತಬಕೀಲೆ ವೀಳ್ಯವ ಹಿಡಿದಾನ ಬೀರಣ್ಣ ಏಳು ಬೀಳು ಎರಡು ತೇಜಿಗಳು
ಏಳು ಬೀಳು ಎರಡು ತೇಜಿಗಳು ತೇಜಿಗೆ ಜೀನು ಮಾಡ್ಯಾನ
ತೇಜಿಗೆ ಜೀನು ಮಾಡ್ಯಾನ ಬೀರಣ್ಣ ಬೇಟಿಯಾಡಲಿಕ್ಕೆ ಹೊಂಟಾನ
ತಂಡ ತಂಡ ಹುಣಿಸೆಮರದ ನಡವೊಂದು ಗಜುಗದ ಪಳಿಯೇಳು
ನಡುವೊಂದು ಗಜುಗದ ಪಳಿ ಅಡೀಲೆ ದೇವಿ ದಿಂಬಿಯ ಮರನೇಳು
ಮರದ ಅಡೆಲೆ ದೇವರಕ್ವಾಣ ಮಲಗ್ಯೆತಿ ಮೂಗಿಲೆ ಉಸಿರಬಿಟ್ವಾರ ಕ್ವಾಣ
ಮೂಗ ಹೋದಾವು ತೇಜಿನಂಬಾರ, ಎಲ್ಲ ಮಕ್ಕಳು
ಬಲ್ಲೆನೆಂದರೆ ನಾನು ಬಲ್ಲೆನೆನಲಿಲ್ಲ, ಅಂದ್ವೇಳಿ ದು:ಖಿಸಿ ಕಣ್ಣೀರ
ತಂದಾನ ಎಡದಲ್ಯಾಸನ ಬಲದಲ್ಲಿ ತಿರುವ್ಯಾನ ಕುಡಿಯಳ್ಳಿ ಮ್ಯಾಲೆ ಹಿರಿದಾನ
ಕುಡಿಯಳ್ಳಿಮ್ಯಾಲೆ ಹಿರಿಯರ ರೌಸಕ ಬಿದ್ದಿತು ಕ್ವಾಣ ನೆಲಕ
ಕ್ವಾಣಬೀಳುವ ರೌಸಕನೋಡು ಗುಡ್ಡೆಲ್ಲ ಗುಡುಗುಟ್ಟ್ಯಾವು
ಗುಡ್ಡೆಲ್ಲ ಗುಡುಗುಟ್ಟ್ಯಾವ ತಮ್ಮ ಗುಂಡೆ ಹೊಡೆದು ತುಂಡ್ಯಾಗ್ಯಾವ
ಗುಡ್ಡದ ಹ್ವಾರೀಲೆ ತಪಸಿಯರ ತಮ್ಮಗೆ ತಾವ ಮಾತಾಡ್ಯಾವ
ಯಾವ ರಾಜನದಂಡಲ್ಲ ಕಾಣ ಬೀರಣ್ಣ ಬ್ಯಾಟಿ ಹೊಂಟಾನ
ಇಲ್ಲಿಗೆ ಒಂದು ಸಂಧ್ವೇಳು ಸ್ವಾಮಿ ಆಡಿದಾರು ಪದ ಮುಂದ್ವೇಳು
|| ಸ್ವಾಮಿ ||

## ೧೦. ಹಡಗಲಿ ಹಾಲಸ್ವಾಮಿ

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ ||
ಕಂಬಳೆಪ್ಪ ಕಂಬಳೊ ಸಣ್ಣನೂಲಿನ ಕಂಬಳೊ
ಸಣ್ಣನೂಲಿನ ಕಂಬಳೊ ಇದು ಯಾರಿಗೊಪ್ಪುವ ಕಂಬಳೊ
ಯಾರಿಗೊಪ್ಪುವ ಕಂಬಳೊ ನಮ್ಮಾ ಸ್ವಾಮಿಗೊಪ್ಪುವ ಕಂಬಳೊ
ಸ್ವಾಮಿಗೊಪ್ಪುವ ಕಂಬಳಪ್ಪ ಮುರದ ಕೊಪ್ಪಿ ಮಾಡಿಟ್ಟಾನ
ಮುರದಕೊಪ್ಪಿ ಮಾಡಿಟ್ಟಾನಪ್ಪ ಮುಂದಕ ಸಾಗಿ ಬಂದಾನ
ಮುಂದಕ ಸಾಗಿ ಬಂದಾನಪ್ಪ ಗೌಳೇರಣ್ಣನ ಕಂಡಾನ
ಗೌಳೇರಣ್ಣ ಗೌಳೇರ ತಮ್ಮ ಹಾಲಿನ ದಾನ ಮಾಡಂದಾನ
ಕಟ್ಟಿದ ಕರಗಳ ಕಣ್ಣಿಯಹೊಡದು ತಂಬಿಗೆ ನೊರೆಹಾಲು ಕರದಾನ
ತಂಬಿಗೆ ನೊರೆಹಾಲು ಕರದಾನಪ್ಪ ಸ್ವಾಮಿಗೆ ಸಲಸುತ ಕೊಟ್ಟಾನ
ಕರಕುಡದ್ಹಾಲು ಎಂಜುವೆಂದು ಮುಂದಕ ಸಾಗಿ ಹೋದಾನ
ಮುಂದಕ ಸಾಗಿ ಹೋದಾನಪ್ಪ ಕುರುಬರಣ್ಣನ ಕಂಡಾನ
ಕುರುಬರಣ್ಣ ಕುರುಬರ ತಮ್ಮ ಹಾಲಿನದಾನ ಮಾಡಂದಾನ
ಮುಚ್ಚಿದ ಮರಿಗಳು ಮುಚ್ಚಿದಂಗ್ಯೆದಾವ ಬಿಂದಿಗೆ ನೊರೆಹಾಲು ಕರದಾನ
ಬಿಂದಿಗೆ ನೊರೆಹಾಲು ಕರದಾನಪ್ಪ ಸ್ವಾಮಿಗೆ ಸಲಸುತ ಕೊಟ್ಟಾನ
ಇವ ನನ್ನ ಮೀಸಲ ಹಾಲವೆಂದು ಮೂರು ಬೊಗಸೆ ಸಲಿಸ್ಯಾನ
ಮೂರು ಬೊಗಸಿ ಸಲಿಸ್ಯಾನಪ್ಪ ಮುಂದಕ ಸಗಿ ಹೋಗ್ಯಾನ
ಮುಂದಕ ಸಾಗಿ ಹೋಗ್ಯಾನಪ್ಪ ತೆಗ್ಗಬಿಟ್ಟು ತೆವರಿಳಿದಾನ
ಆವಕಾವ ಗುರುಹಿರಿಯರ ನಮ್ಮ ಗುರುವ ನೀವು ಕಂಡೀರೆ
ನಮ್ಮ ಗುರುವನು ಕಂಡೀರೇ ನಮ್ಮ ಗುರುವಿನ ಗುರ್ತ ಹೇಳಿರೆ
ಅಂಡಗೊಂಗಡಿ ಸರಗಿನ ಚಿತ್ತ ಸದರಕಂಬಿನ ಹಚ್ಚಡ
ಬಟ್ಟನ್ನು ಮಾರಿ ಬಗರಿಯ ಗಡ್ಡ ನೆಟ್ಟನ್ನು ಮೂಗಿನ ಚೆಲುವನ
ನೆಟ್ಟನ್ನ ಮೂಗಿನ ಚೆಲುವನಮ್ಮ ಹಡಗಲಿ ಹಾಲುಸ್ವಾಮೇಳು
ಹಾಕ ಚೌರ ಉಲ್ಲಾಸ ಪಾವುಡ ದೇಶದ ಮ್ಯಾಲೆ ನಮ್ಮ ಮರವಣಿಗಿ
|| ಸ್ವಾಮಿ ||

## ೧೧. ಈರಪ್ಪ

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ |
ಈರನೆಂದರೆ ಹ್ಯಾಗಿರಬೇಕು ಧೀರತನಗಳು ಇರಬೇಕು
ಧೀರತನಗಳು ಇಲ್ಲದ ಬಳಿಕ ಹಿರಿತನಗಳು ಸಲ್ಲಾವ
ಈರತನಕ ತಕ್ಕಂಗ ಒನಪು ಜಂಪುಗಳಿರಬೇಕು
ಒನಪು ಜಂಪುಗಳಿಗೆ ತಕ್ಕಂಗ ಕಿರುಗೆಜ್ಜೆ ಕುಣಿಸುವ ಬರಬೇಕು
ಡೊಳ್ಳಿನ ಮ್ಯಾಗಳ ಮುಂಗೈ ಹಸ್ತ ಗಿಳಿಪಾತರನಂತಿರಬೇಕು
ತಾಳಮೇಳ ಪಿಲ್ಲಾಳ ಕೊಳಲು ಸೈಸಂಗತಿ ಕೂಡಿ ಬರಬೇಕು
ಸೈಸಂಗತಿ ಕೂಡಿಬಂದರೆ ಸ್ವಾಮಿ ಕಂಡುಸೈ ಅಂದಾರೆ
ಸ್ವಾಮಿ ಕಂಡು ಸೈ ಅಂದಾನಪ್ಪ ಹತ್ತು ಮಂದಿ ಹೌದಂದಾರ
ಹತ್ತುಮಂದಿ ಹೌದಂದಾರಪ್ಪ ಗುರುಹಿರಿಯರು ಒಪ್ಪಿಕೊಂಡಾರ
ಗುರುಹಿರಿಯರು ಒಪ್ಪಿಕೊಂಡಾರಪ್ಪ ಕಳುವ್ಯಾರ ಕರ್ಪುರದೀಳ್ಯಾವ
ಕೈಪಂಜು ಕೈಯೊಳಗಿಡಕೊಂಡು ಈರಾರ ಮಕ್ಕಳು ಆಡ್ಯಾರ
|| ಸ್ವಾಮಿ ||

## ೧೨. ರೇವಣಸಿದ್ಧ

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ
ಏಸೊಂದು ಪರಿಯಲ್ಲಾಡಿದರ ಇವ ಸಾಸರ ಮುಖದವನೊಬ್ಬವನೆ
ಸಾಸರ ಮುಖದ ಸದಾಶಿವನು ಇದ್ದು ಇಲ್ಲದವ ನಮ್ಮವನೆ
ಇದ್ದು ಇಲ್ಲದ್ದು ನಿಮ್ಮೊಳಗಾಡಿದ ನಮ್ಮ ಹಿರಿಯರನು ಬಲ್ಲವರ
ನಿಮ್ಮೊಳಗಾಡಿದ ನಮ್ಮ ಹಿರಿಯರು ಮನ್ನನೇಳಿ ಮರಿಗೊಂಡಾರ
ಮನ್ನನೇಳಿ ಮರಿಗೊಂಡಾರ ಸ್ವಾಮಿ ಪುಣ್ಯಕೆ ಜಾಗೀರಾಗ್ಯಾರೆ
ಹಿರಿಯರನ್ನೆಲ್ಲ ಹಿಂದೆಗೆಳೆದು ಕುರುಹುಡುಗರು ನಾವು ಬಂದೀವಿ
ಕರು ಹುಡಗರು ನಾವು ಬಂದೀವಿ ಸ್ವಾಮಿ ಕಡೆಗಣ್ಣಿನಲಿ ನೋಡಬ್ಯಾಡಯ್ಯ
ತಡೆದ ಕಂಠಮಲಿ ಕಿಡಿಗಣ್ಣಿಲೆ ನೋಟ ಸವಗಣ್ಣಿಲೆ ನಮ್ಮ ಸಲುವಯ್ಯ
ಸವಗಣ್ಣಿಲೆ ನಮ್ಮ ಸಲುವುತ ಬಾ ನಮ್ಮಪ್ಪ ರೇವಣಸಿದ್ಧನೆ

ಇಲ್ಲಿಗೆ ಹರಹರ ಇಲ್ಲಿಗೆ ಶಿವಶಿವ ಇಲ್ಲಿಗೆ ಇದು ಒಂದು ಸಂದೇಳು
ಹಾಲುಮತವೊ ಹನುಮಸಾಗರೊ ಗಿಳಿವೊಂದು ಕೋಣೆಗೆ ನೂರಯ್ಯೊ
|| ಸ್ವಾಮಿ ||

## ೧೩. ರೋಣದ ಹಾಡು

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ |
ಹುಲುಲುಗ್ಯಾ ಹುಲುಲುಗ್ಯಲೇ ತಮ್ಮ ಹುಲುಲುಗ್ಯಾ
ಹೇಳ್ತೀನಿ ಕೇಳಲೇ ತಮ್ಮ ಹುಲುಲುಗ್ಯಾ
ಶಿರಹಟ್ಟಿ ಜಾತ್ರಿಗೊಮ್ಮೆ ಹೋರಿ ತರಾಕ ಹೊಂಟ್ನೆಲೆ ತಮ್ಮ ಹುಲುಲುಗ್ಯಾ
ಹೋರಿ ನೋಡಿ ಖರೀದಿಗೆ ಕೇಳಿದ್ನೆಲೆ ತಮ್ಮ ಹುಲುಲುಗ್ಯಾ
ಕರದು ಸಾವಿರ ಹೇಳಿದ್ರಲೆ ತಮ್ಮ ಹುಲುಲುಗ್ಯಾ
ಸಾವಿರ ಹೇಳದ್ರೊಳಗ ಮೈಮುಟ್ಟಿ ಕೈಮುಟ್ಟಿ ಎಬ್ಬಿಸಿದ್ನೆಲೆ ತಮ್ಮ ಹುಲುಲುಗ್ಯಾ
ಸೂಳಿಗೇರ್‍ಯಾರು ಬಂದು ಸುಳಿ ನೋಡಿದ್ರು
ಕೋಡೆಳ್ಳಾರು ಕೋಡು ನೋಡಿದ್ರು
ಮುದ್ದಾಪುರದಾರು ಬಂದು ಮೂಗು ನೋಡಿದ್ರಲೇ ತಮ್ಮ ಹುಲುಲುಗ್ಯಾ
ಕವಿತಾಳರು ಬಂದು ಕಿವಿ ನೋಡಿದ್ರು
ಅಣ್ಣಿಗೇರ್‍ಯಾರು ಬಂದು ಕಣ್ಣು ನೋಡಿದ್ರು
ಅಬ್ಬಿಗೇರ್‍ಯಾರು ಬಂದು ಡುಬ್ಬ ನೋಡಿದ್ರಲೇ ತಮ್ಮ ಹುಲುಲುಗ್ಯಾ
ಹ್ಯಾಡ್ಲದಾರು ಬಂದು ಹೆಗಲು ನೋಡಿದ್ರು
ಕೌಲೂರಾರು ಬಂದು ಕಾಲು ನೋಡಿದ್ರು
ಕೊಳಚಿಯಾರು ಕೊಳಗ ನೋಡಿದ್ರಲೇ ತಮ್ಮ ಹುಲುಲುಗ್ಯಾ
ಗಜಾಪುರದರು ಭುಜ ನೋಡಿದ್ರು
ಬಾಗಳಿಯಾರು ಬಾಲ ನೋಡಿದ್ರು, ಬಾಗಲಕೋಟ್ಯಾರು ಬಾಯಿ ನೋಡಿದ್ರು
ಬ್ಯಾಲಹುಣಿಸಿಯಾರು
ಕಲ್ಲಳ್ಳಿಯಾರು ಬಂದು ಖರೀದಿ ಮಾಡನ್ನದ್ರಾಗ
ಗುಡ್ಡಾನೂರಾರು ಬಂದು ಹೂಡಾನಂದ್ರಲೇ ತಮ್ಮ ಹುಲುಲುಗ್ಯಾ
ಹನುಕುಂಟಿಯಾರು ಕುಂಟತಂದ್ರು
ಬಳ್ಳಾರಿಯಾರು ಬಳಿ ತಂದ್ರು

ಕೂಡ್ಲಿಗಿಯಾರು ಬಂದು ಕುಡ ತಂದ್ರಲೇ ತಮ್ಮ ಹುಲುಲುಗ್ಯಾ
ಉಡುಪಿಯಾರು ಹೂಡಿದ್ರು
ಚಲ್ಲುವಡಿಗ್ಯಾರು ಚ್ಯಾ ಅಂದ್ರು
ಹ್ಯಾಡ್ಲದರು ಬಂದು ಎಳೆತ ನೋಡಿದ್ರಲೇ ತಮ್ಮ ಹುಲುಲುಗ್ಯಾ
ನೀರ್ಲಿಗಿಯರು ಇರ್ಲಬಿಡು ಅಂದ್ರು
ದುಗ್ಗತ್ತ್ಯಾರು ದುಡ್ಡುಕೊಟ್ರು
ಹಣಸಿಯಾರು ಬಂದು ಎಣಿಸಿ ಕೊಟ್ರಲೇ ತಮ್ಮ ಹುಲುಲುಗ್ಯಾ
ಕಗ್ಗನಳ್ಳಾರು ಹಗ್ಗ ಹಟ್ಟಿದ್ರು, ಮುಂಡ್ರಗಿಯರು ಮುಂದಕ್ ಬಿಟ್ ಕೊಟ್ರು
ಇಡಿಚಿಯಾರು ಬಂದು ಹಿಡಿ ಹಗ್ಗ ಅಂದ್ರಲೇ ತಮ್ಮ ಹುಲುಲುಗ್ಯಾ
ಅಂದು ಒಂದು ಮಾತ್ನ್ಯಾಗ ಚಂದಾಗಿ ಹಿಡ್ಕಂಡು ಒಂದ್ನೆಲೇ ತಮ್ಮ ಹುಲುಲುಗ್ಯಾ
|| ಸ್ವಾಮಿ ||

## ೧೪. ಜೊಳ್ಯಾಸುರನ ಪದ

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನಿರೇ |
ಬೇಡಿದ್ದು ಕೊಡುವಂಥ ರೂಢಿಗೀಶನ ಕಾಡಿದ್ದು ಕೇಳಿರಿ ಹೇಳುವೆನು
ಜೊಳ್ಳಾಸುರನೆಂಬ ಕಳ್ಳ ದೈತ್ಯನು ಬೋಳ ಶಂಕರಗೆ ಮರೆಬಿದ್ದ
ಉಪವಾಸ ಕುಂತವ ತಪಸ್ಸುಮಾಡಿ ಶರಶಿವಾರಸ್ತು ಏಡಿ ಬೇಕಂದ |
ದುಷ್ಟದೈತ್ಯನ ಹೊಟ್ಟೆಯೊಳಗಣ ಕೆಟ್ಟ ಗುಣ ಕೇಳಿರಿ ಒಂದೀಟ
ಅಷ್ಟ ದೈತ್ಯರೊಳ್ ಶ್ರೇಷ್ಠನೆನಿಸಿ ತಾ ಸ್ರಿಷ್ಠಿಗೀಶನಾಗಬೇಕೆಂದಾ
ದೇವರಿಗಿಂತಾ ದೇವನಾಗುತೀನಿ ಸಾವು ಹುಟ್ಟು ನನಗಿಲ್ಲೆಂದ
ಚಿರಂಜೀವಿಯಾಗಿ ಪರಸ್ಪರ ನಾನು ಪಾರ್ವತಿದೇವಿ ಆಳಬೇಕೆಂದ
ಅಷ್ಠ ತಿಳಿದು ದೈತ್ಯ ಶ್ರೇಷ್ಠ ತಾ ನಿಷ್ಟಲಿಂದ ಮಾತಿದ ತಪಸ್ಸು
ಬೋಳ ಶಂಕರನು ಖೂಳ ದೈತ್ಯನಿಗೆ ಏನು ಬೇಡುತ್ತಿದಿ ಬೇಡೆಂದಾ
ನಿನ್ನ ತಪ್ಪಸ್ಸಿಗೆ ಚೆನ್ನಾಗಿ ಮೆಚ್ಚಿನಿ ಇನ್ನೇನು ಬೇಡುತ್ತಿ ಬೇಡೆಂದಾ
ವಚನ ಕೊಟ್ಟರೆ ರಚನವಾಗಿ ಚರ್ಚಿಸಿ ಹೇಳುತ್ತೀನಿ ಮನದಂದಾ
ಸೃಷ್ಠಿಕರ್ತ ಶಿವ ಸಿಟ್ಟಾಗಿ ಹೇಳುತ್ತಾನೆ ಕೊಟ್ಟ ವಚನ ತಪ್ಪುವದಿಲ್ಲೆಂದ
ಮುಂದಲ ಮಜಕೂರ ಚಂದಾಗಿ ಕೇಳಿರಿ ಮಂದಬುದ್ದಿ ಆ ದೈತ್ಯನದ
ಗಂಗಾಧರನನ್ನ ಅಂಗದ ಒಳಗೆ ನುಂಗುವ ವರವನ್ನು ಕೇಳಿದೀಗ

ಇಂಥಾದೊಂದು ನಾನು ಪಂಥ ಮಾಡಿಕೊಂಡು ಕುಂತಿದ್ದೇನು ನಾನು ಉಪವಾಸ
ಹೊನ್ನು ಒಲ್ಲೆ ನಾನು ಚಿನ್ನಒಲ್ಲೆ ನಾನು ನಿನ್ನನ್ನು ಮಾತ್ರ ನಾನು ನುಂಗುವೆನೆಂದಾ
ಅಂದ ಮಾತು ಕೇಳಿ ಕಂದು ಗೊರಳನಾಗ ನನ್ನದೊಂದು ಮಾತ್ಯೆತಿ ಕೇಳೆಂದ

**ವಚನ**

ಪರಮಾತ್ಮನು ಅನ್ನುತ್ತಾನೆ ಎಲೈ ಜೊಳ್ಳಾಸುರನೆ ನಿನ್ನ ತಪ್ಪಸ್ಸಿಗೆ ಮೆಚ್ಚಿದೆ. ಏನು ಬೇಡುತ್ತೀಯಾ ಬೇಡೆಂದನು. ಆಗ ಜೊಳ್ಳಾಸುರನು ನಿನ್ನ ದೇಹವನ್ನು ನನ್ನ ಪಿಂಡಾಂಡದೊಳಗೆ ನುಂಗಬೇಕೆಂದು ತಪಸ್ಸು ಮಾಡಿದ್ದೇನೆ. ಈಗ ನಿನ್ನನ್ನು ನುಂಗುತ್ತೇನೆ ಎಂದನು. ಆಗ ಪರಮಾತ್ಮನು ಅನ್ನತ್ತಾನೆ, ಎಲೈ ಜೊಳ್ಳಾಸುರನೇ ಕೇಳತಕ್ಕಂಥ ವಸ್ತುವನ್ನು ಕೇಳಲಿಲ್ಲ ಆದರೆ ನನ್ನ ದೇಹವನ್ನು ಕೊಡಲಿಕ್ಕೆ ಸಿದ್ಧನಿದ್ದೇನೆ. ಆದರೆ ನನ್ನ ದೇಹ ನನ್ನ ಸ್ವತಂತ್ರವಿಲ್ಲ. ಯಾಕೆಂದರೆ ನನಗೆ ಅರ್ಧನಾರೀಶ್ವರನೆಂಬ ಹೆಸರು ಬಂದಿರುವುದು ಆದಕಾರಣ ಪಾರ್ವತಿದೇವಿಯನ್ನು ಕೇಳಿಕೊಂಡು ಬಂದು ನನ್ನ ದೇಹವನ್ನು ನಿನಗೆ ಕೊಡುತ್ತೇನೆಂದು ಕೈಲಾಸಕ್ಕೆ ತೆರಳುವಂಥವನಾದನು.

ಪದ

ಹೋಗಿ ಬರುತ್ತೇನಂಥ ಆಗ ಪರಮಾತ್ಮನು ಬೇಗ ಕೈಲಾಸಕ್ಕೆ ತೆರಳಿದನು
ಹೊಕ್ಕನು ಕೈಲಾಸ ಮುಕ್ಕಣ್ಣ ಸಾಂಬನು ಮುಕ್ತಿ ಸಿಂಹಾಸನ ಏರಿದನು
ಗಂಧರ್ವ ಗರಡರು ಬಂದು ಚೆನ್ನಾಗಿ ವಂದನೆ ಮಾಡಿದರು
ಗಿರಿಜನಂದಿನಿಯು ಆಗ ಹರನ ಪಾದಕ್ಕೆರಗಿ ಶಿರಬಾಗಿ ವಂದನೆ ಮಾಡಿದಳು
ಬಲ್ಲಿದ ಶಿವನಿಗೆ ಎಲ್ಲರು ಕೈಮುಗಿದು ಎಲ್ಲಿಂದ ಬಂದಿರಿ ಹೇಳಿನ್ನು
ಬಾಳಾಕ್ಷ ಅನ್ನುತ್ತಾನೆ ಲಾಲಿಸಿ ಕೇಳಿರಿ ಭೂಲೋಕಕ್ಕೆ ನಾನು ಹೋಗಿದ್ದನು
ಮರ್ತ್ಯಲೋಕದೊಳಗೆ ಆದ ವರ್ತಮಾನ ತುರ್ತಕ್ಕೆ ಕೇಳಿರಿ ಹೇಳುವೆನಾ
ಅನುಗಾಲ ನನಗಾಗಿ ಅಲ್ಲೊಬ್ಬ ದೈತ್ಯನು ಘನವಾದ ತಪಸ್ಸು ಮಾಡಿದನು
ಅಂತ:ಕರಣದಿಂದ ಅವನ ಹತ್ತಿರ ಹೋಗಿ ಏನು ಬೇಡುತ್ತಿ ಬೇಡೆಂದೆನು
ಯಾರ‍್ಯಾರು ಬೇಡದ ವರವನ್ನು ಬೇಡಿದ ಘೋರ ಬಂತು ನನಗೆ ಮಾಡಲ್ಯಾಂಗೆ
ಮಂಗ ದೈತ್ಯನು ಅಂಗದ ಒಳಗೆ ನುಂಗುವ ವರವನ್ನು ಕೇಳಿದನು
ಗಂಗಾದೇವಿ ಇದಕೆ ಹ್ಯಾಂಗೆ ಮಾಡಲಿ ನಾ, ಮಂಗ ದೈತ್ಯಗೆ ಮಾತು ಕೊಟ್ಟೆಹೆನು |
ಮಾತು ಕೊಟ್ಟಮೇಲೆ ತಪ್ಪುವುದ್ಯಾಕಿನ್ನು ಪ್ರೀತಿಲಿಂದ ಹೋಗಿ ಬರ‍್ರಿ ನೀವು

**ವಚನ**

ಪರಮಾತ್ಮನು ಅರುಹಿದ ಮಾತಿಗೆ ಗಿರಿಜೆಯು ಅನ್ನುತ್ತಾಳೆ. ಅಯ್ಯೋ ಹರನೆ ಆದೈತ್ಯನು ನಿನ್ನ ಅಂಗವನ್ನು ನುಂಗಿದ ಮೇಲೆ ನನ್ನ ಮುತ್ತೈದಿ ತನಕ್ಕೆ ಧಕ್ಕೆಯನ್ನು ತಂದಿರಲ್ಲಾ ಎಂದಳು. ಆಗ ಪರಮಾತ್ಮನು ಅನ್ನುತ್ತಾನೆ, ಎಲೆ ಸತ್ಯವುಳ್ಳ ಪಾರ್ವತಿಯೇ ಕೇಳು, ನಿನ್ನ ಮುತ್ತೈದಿತನವು ಸ್ಥಿರವಾಗಿದ್ದರೆ ಆದೈತ್ಯನು ನನ್ನ ನುಂಗಿದರೇನು ಅಥವಾ ಬಿಟ್ಟರೇನು ಮುತ್ತೈದಿತನಕ್ಕೆ ಕುಂದು ಬರಲರಿಯದು ಎಂದನು. ಆಗ ದುರ್ಗಿಯು ಅನ್ನುತ್ತಾಳೆ, ಏ ಸತ್ಯವುಳ್ಳ ಸದಾಶಿವ ಮೃತ್ಯುಂಜಯನೇ ನೀವು ಆ ದೈತ್ಯನಿಗೆ ಮಾತು ಕೊಟ್ಟಿದ್ದೀರಿ. ನಿಮ್ಮ ಸತ್ಯಕ್ಕೆ ನಿಮಿತ್ಯ ಬಾರದಂತೆ ಅದಕ್ಕಾಗಿ ತುರ್ತು ಹೋಗಿ ಬನ್ನಿರೆಂದು ಪಾರ್ವತಿದೇವಿಯು ಪರಮಾತ್ಮನನ್ನು ಕಳುಹಿಸುವಂಥಾಕಿ ಯಾದಳು.

**ಪದ**

ಗಿರಿಜೆ ಅಪ್ಪಣೆಯನ್ನು ಹರನು ತಕ್ಕೊಂಡು ತಿರುಗಿ ಬಂದನು. ಸ್ವರ್ಗಲೋಕಕ್ಕೆ
ಸಾಕ್ಷಾತ್ ತಾ ಬಂದು ರಾಕ್ಷಸನಿಗೆ ಅನ್ನುತ್ತಾನೆ. ಈ ಕ್ಷಣ ಕೇಳೋ ನೀ ಅಂಬುದೇನಾ
ಶಂಭುವೇ ನಾನೀಗ ಅಂಬುವದೇನೈತೆ ತಿಂಬುವದು ನಿನ್ನನ್ನು ತುರ್ತಕ್ಕೆ ನಾನಾ
ಇಂದಿಗೆ ನನ್ನ ನುಂಗಿ ಎಂದಿಗೆ ಬಿಡುವದು ಚೆನ್ನಾಗಿ ಮಾಡೋ ಕರಾರವನಾ
ಮುದ್ದತು ಮಾಡಿ ನೀ ನುಂಗ ನನ್ನ ಸದ್ಯಕ್ಕೆ ಸಿದ್ದನಾಗಿ ಬಂದಿದ್ದೆನಾ
ಎಂದಿಗೆ ಕೂಡುವವು ಪಂಚರಾತ್ರಿಗಳು ಅಂದಿಗೆ ನಿನ್ನನ್ನು ಬಿಡುಹುವೆನು
ಒಳ್ಳೆದು ನುಂಗೋದು ಪರಮಾತ್ಮ ಆಗ ಕಳ್ಳದೈತ್ಯ ತಾ ನುಂಗಿದನಾ
ಮಸಲತ್ತು ಕೇಳಿರಿ ಅಸುರನು ಮಾಡಿದ್ದು ಕಸಿಬಸಿ ಬಿಡತನ ಮುಂದಲನೂ
ಮನದೊಳಗೆ ಅಂಬುತಾನೆ ಅಣೆಯಿಲ್ಲಾ ನನಗ್ಯಾರು ಘನಮಹಿಮ ಶಿವನನ್ನು ನುಂಗಿದೆನಾ
ಮೂರು ಲೋಕಕ್ಕೆಲ್ಲಾ ಕಾರಣನಾದಂತ ಧೀರ ಗಂಗಾದೇವಿ ಆಳುವೆನಾ
ಸಾಯದು ಹುಟ್ಟಿದು ನನಗಿಲ್ಲಾ ಕೇಳಿರಿ ದೇವರಿಗಿಂತ ದೇವನಾದೆ ನಾನು
ಜಂಭರಾರಿಯು ನಾನು ಶಂಭೋಶಂಕರ ನಾನು ಗಂಭೀರ ಪರಶಿವ ನಾನಾದೆ
ಇಷ್ಟೊಂದು ಗರ್ವವು ಹುಟ್ಟಿತು ಅವನಿಗೆ ಸೃಷ್ಟಿಕರ್ತನ ಮಹಿಮೆ ಕೇಳಿರಿನ್ನು
ನಂಬಿಕೆಟ್ಟವರಿಲ್ಲ ಶಂಭ ಶಂಕರ ತಾನು ಕುಂಬಾರ ಹುಳದಂತೆ ಇರುತಿಹನು
ಇದರಂತೆ ದೈತ್ಯನ ಉದರದಲ್ಲಿ ಇದ್ದನು ಹೆದರಿಕಿ ಇದ್ದಿಲ್ಲ ಶಿವಗಿನ್ನು
ವಾಯ್ದೆಕ್ಕೆ ಸರಿಯಾಗಿ ಪಂಚರಾತ್ರಿಗಳು ಒಂದೇ ದಿವಸಕ್ಕೆ ಬಂದು ಕೂಡಿದವು
ಕೂಡಿದರು ಬಿಡಲಿಲ್ಲ ರೂಢಿಗೀಶ್ವರನನ್ನು ಆಡಿದ ವಚನಕ್ಕೆ ತಪ್ಪಿದನು
ಕಾಡುವ ಕಾಲಕ್ಕೆ ಕೂಡಿ ದೈತ್ಯನಿಗೆ ಮಾಡಿತು ವಿಧಿ ಉಪಟಳವನು
ಮುಂದಲ ಮಜಕೂರ ಚೆಂದಾಗಿ ಕೇಳಿರಿ ಒಂದು ಉಳಿಯದಂತೆ ಹೇಳುವೆನು.

**ವಚನ**

ಕೇಳಿರಿ ಕೆಟ್ಟ ದೈತ್ಯನಿಗೆ ಕಟ್ಟು ಮಾಡಿಕೊಟ್ಟ ವಚನವೇನೆಂದರೆ ಒಂದೇ ದಿವಸಕ್ಕೆ ಪಂಚರಾತ್ರಿಗಳು ಎಂದಿಗೆ ಕೂಡುವವು ಅಂದಿಗೆ ಬಿಡುಹುವೆನೆಂದನು. ಪರಮಾತ್ಮನಿಗೆ ಪಂಚಮುಖಗಳು ಇದ್ದವು. ಆದ್ದರಿಂದ ಪಂಚರಾತ್ರಿಗಳು ನಾನು ಮುಂಚೆ ನೀನು ಮುಂಚೆ ಎಂದು ಕೂಡುವಂಥವುಗಳಾದವು. ಕೂಡಿದರು ಪರಮಾತ್ಮನನ್ನು ಬಿಡದೆ ಹೋದನು.

(ಪಂಚರಾತ್ರಿಗಳು ಕಾಮ, ಕ್ರೋಧ, ಮದ, ಮೋಹ, ಮತ್ಸರಗಳು ಪಂಚರಾತ್ರಿಯ ಪ್ರತೀಕ)

**ಪದ**

ಭಾಳಾಕ್ಷ ಹೋಗಿನ್ನು ಕೈಲಾಸಪಟ್ಟಣ ಹಾಳು ಬಿದ್ದಾಂಗ ಆಯಿತು ಕೇಳಿರಿ ಇನ್ನು
ಗಡಿಬಿಡಿ ಬಿದ್ದಿತು ಮಡದಿಯು ಪಾರ್ವತಿ ಬಿಡದೆ ಮಾಡಿದಳು ದು:ಖವನು
ಸೃಷ್ಠಿಕರ್ತನು ಹೋಗಿ ಎಷ್ಟು ದಿವಸವಾಯಿತು ಕೆಟ್ಟದೈತ್ಯನು ಮಾಡಿದನು
ಮಂದಾರಗಿರಿಯವಾಸ ಇಂದ್ರಾದ್ಯರು ಬರಲಿಲ್ಲ ಎಂದು ಕಂಡೆನವರ ಮಾರಿಯನು
ಮುಕ್ಕಣ್ಣ ಶಿವ ಎನ್ನ ದುಃಖಕ್ಕೆ ಗುರಿಮಾಡಿ ಅಕ್ಕರತೆ ಎಂಬುದು ಹೋಯಿತಿನ್ನು
ನಂದೀಶ ಎನಗಿನ್ನು ತಂದಾನು ವನವಾಸ ಮುಂದೇನು ನಾನಿದ್ದು ಮಾಡುವೆನು
ಎಲ್ಲಿಹನೆಂದು ವಲ್ಲಭ ಶಿವನನ್ನು ಎಲ್ಲರಿಗೆ ಹೇಳ್ಯಾಳು ಹುಡುಕರಿನ್ನು
ಹರಹರ ಎನ್ನುತ ಮರಮರ ಮರಗುತ ಹರಿ ಮಾರಿಯಾ ನೋಡ್ಯಾಳು ದೃಷ್ಠಿಸಿನ್ನು
ಹರಿ ಬಂದು ಅಂಬುತಾನೆ ಗಿರಿಜಿಗೆ ನೀ ಇನ್ನು ಮರುಗುದ್ಯಾಕಮ್ಮ ಮನದೊಳಗೆ
ಅನುಮಾನವಿದ್ದಿದ್ದು ಎನಗಿಷ್ಟು ಹೇಳಮ್ಮ ಸನುಮತ ನಾನೀಗ ಹೇಳುವೆನು
ಅಂತಾಳೆ ಪಾರ್ವತಿ ಕಂಡು ಹರನು ಹೋಗಿ ಸಂತೋಷ ನನಗಿಲ್ಲ ಕೇಳೋ ನೀನು
ಒತ್ತರದಿಂದ ಹೋಗಿ ಗೊತ್ತು ಹಚ್ಚಿ ಬಾ ಮತ್ತಾರ ಕಡೆಯಿಂದ ಆಗುವುದೇನು
ತಾಯವ್ವ ನೀ ಕೇಳೆ ಮಾಯ್ವಾದ ಶಿವನನ್ನು ಎಲ್ಲಿ ಹುಡುಕಲಿ ಹೇಳೆ ನೀನು
ನಿನ್ನ ಪ್ರಯತ್ನವು ಯಾರಿಗೂ ತಿಳಿದಿಲ್ಲ ಚೆನ್ನಾಗಿ ಶೋಧಿಸಿ ಹುಡುಕು ನೀನು
ಪರಿಪರಿಯಿಂದಲಿ ಗಿರಿಜೆ ಹೇಳಿದ ಮಾತು ಸರಿಬಂದು ಅನ್ನುತ್ತಾನೆ ಹರಿಯು ತಾನು
ನಿನ್ನ ಆರ್ಶೀವಾದ ಎನ್ನ ಮೇಲೆ ಇದ್ದರೆ ಪನ್ನಂಗಧರನನ್ನು ಹುಡುಕುವೆನಾ
ಕೊಡು ಕೊಡು ಅಪ್ಪಣೆ ತಡವ್ಯಾಕೆ ಹಡದವ್ವ ಒಡೆಯ ಶಂಕರನನ್ನು ಹುಡುಕುವೆನಾ
ಲೇಸಾಗಿ ಈಶ್ವರನು ವಾಸವಾಗಲೆಂದು ಆಶೀರ್ವಾದ ಕೊಟ್ಟಳು ತಾಯಿಯಿನ್ನು

ವಚನ

ಕೇಳಿರಿ ವಿಷ್ಣುವಿನ ಪ್ರಯತ್ನವನ್ನು ಎಷ್ಟಂತ ಹೇಳಲಿ ಕೃಷ್ಣನು ಪರಮಾತ್ಮನನ್ನು ಹುಡುಕುವುದಕ್ಕೆ ಅತಳ ವಿತಳ ಸುತಳ ಪಾತಳ ರಸತಾಳ ಇಂಥಪ್ಪ ಹದಿನಾಲ್ಕು ಲೋಕಗಳನ್ನು ಹುಡುಕಿದಾಗ್ಯೂ ಪರಮಾತ್ಮನ ದರುಶನವೇ ಇಲ್ಲದೋಯಿತು. ಆಗ ತನ್ನ ದಿವ್ಯದೃಷ್ಠಿಯಿಂದ ನೋಡಲು ಆ ದೈತ್ಯನ ಉದರದಲ್ಲಿ ಇರುವುದನ್ನು ಕಂಡು ಹರಿಯು ಅನ್ನುತ್ತಾನೆ ಈ ದೈತ್ಯನನ್ನು ಕೆಣಕುವ ಶಕ್ತಿ ನನಗಿಲ್ಲ. ಆದ್ದರಿಂದ ಹರಿಯು ಮಾಡಿದ ಪ್ರಯತ್ನವೇನೆಂದರೆ

ಪದ

ಪರಮಾತ್ಮನಿಗಿನ್ನೂ ಅರಿವು ಆಗಲೆಂದು ಹರಿ ತನ್ನ ಸ್ತೋತ್ರ ಕೊಂಡಾಡಿದನು
ಹರಹರ ಶಿವಶಿವ ಗುರುದೇವ ನೀ ಹೋಗಿ ಧರಿಯಲ್ಲಿ ಮರಮರ ಮರುಗುವದೋ
ಅದಕ್ಕಾಗಿ ನಾ ನಿನ್ನ ಪಾದಕೆ ವಂದಿಪೆ ನೀ ಎನ್ನ ಸಲವೋದೋ ದೇವ
ಪಾರಾಗಿ ಬರುವಂಥ ಭಾರವು ನಿನ್ನದು ಆಗದು ದೈತ್ಯನ ಕೆಣಕುವುದಾ
ದೈತ್ಯನ ಕೆಣಕುವ ಚೈತನ್ಯ ನನ್ನಿಂದ ಆದಿತ್ಯಾಂಗೆ ಹೇಳಿರಿ ಸ್ವಾಮಿ
ನೀ ಇಷ್ಟೆಲ್ಲ ಸ್ತ್ರೋತ್ರದ ವಿಷ್ಣು ತಾ ಮಾಡಿದ್ದು ಹೊಟ್ಟೆಯೊಳಗೆ ಶಿವಕುಂತು ಕೇಳಿದನಾ
ಸರ್ವಾಂತರ್ಯಾಮಿಯು ಸರ್ವರಿಗೂ ಮಹಿಮೆಯು ಅರವಾಯಿತೊ ಹರಿಸ್ತ್ರೋತ್ರ ಮಾಡುವುದಾ
ಉಲ್ಲಾಸವಾಗಿನ್ನು ಕೈಲಾಸಧೀಶನ ಚಲ್ಲಾಟ ಕೇಳಿರಿ ಮುಂದಾಗೋದ
ಚಿನ್ಮಯ ಶಿವನಿಗೆ ಮರ ಉಕ್ಕಿದ್ಹಾಂಗೆ ದನುಜನ ಹೊಟ್ಟೆಯು ಬೆಳೆಯುವದ
ಹೊಟ್ಟೆಯು ಬೆಳೆದದ್ದು ಎಷ್ಟಂಥ ಹೇಳಲಿ ಬೆಟ್ಟದಾಕಾರ ತೋರುವುದು
ಅಷ್ಟಾಗಿ ತಿಳಿಲಿಲ್ಲ ಕೆಟ್ಟ ದೈತ್ಯನಿಗೆ ಹೊಟ್ಟೆಯು ಮಿರಿಮಿರಿ ಮಿಂಚುವುದ
ಪರಿಪರಿಯಿಂದಲಿ ಹರಿಯು ತಾ ಮತ್ತಷ್ಟು ಪರಮಾತ್ಮನ ಧ್ಯಾನ ಮಾಡುವನಾ
ಧಾನ್ಯ ಮಾಡಿದಾಗ ಮಹದೇವನಾ ಹನ್ನೊಂದು ಕ್ಷೋಣಿದೈತ್ಯನ ಹೊಟ್ಟೆ ಬೆಳೆಯುವದಾ
ಆನಂದ ಆದದ್ದು ನಾನೇನು ಹೇಳಲಿ ಈಗ ಬೆಳೆಯುವದಾ
ಬೆಳಕೊಂತ ನಡದೀತು ಉಳುಕೊಂಡ ನಡೆದೀತು
ಕೊಂಬದ್ದಾಗಿನ್ನು ಅಳಿಗಾಲ ಬಂದಿತು ಸಾಯುವುದು
ಎಷ್ಟಂತ ತಡದೀತು ಚಟ್ಟನೆ ಸಿಡಿದೀತು
ಹೊಟ್ಟೆಯು ಹೊಡೆದಿತು ದೈತ್ಯನದಾ
ಎಡಬಲಕೆ ಎರಡು ತುಂಡಾಗಿ ಬಿದ್ದನು ಕೆಡಕು ದೈತ್ಯ ತನ್ನ ಗರ್ವದಿಂದ
ಪರಮಾತ್ಮ ಪಾರಾಗಿ ಹೊರಬಿದ್ದು ಕೂತದ್ದು ಹಿರಿಯರೇ ಕೇಳಿರಿ ವಿಳಿದ ಪದಾ !!

ವಚನ

ಹುರಿಗಣ್ಣನ್ನು ಮುಚ್ಚಿಕೊಂಡು ಹೊರಗೆ ಬರುವಂಥಾದನು. ಆಗ ಹರಿಯು "ಪರಮಾತ್ಮನನ್ನು ಮಾತಾಡಿಸಿದರೆ ಉರಿಗಣ್ಣು ತೆರೆಯುತ್ತಾನೆ. ನಾನು ಮತ್ತು ಈ ಭೂಮಿ ಕೂಡ ಸುಟ್ಟುಹೋಗುತ್ತದೆ.

ಪದ

ಹರಿಯು ಮಾಡಿದ ಬೇಕು ಹಿರಿಯರೆ ಕೇಳಿರಿ ಕುರುಬರ ಡೊಳ್ಳಿನ ಪಡಗವನ
ಸೊಕ್ಕಿದ ದೈತ್ಯನ ಡೊಕ್ಕಿಯ ಎಲುಬನ್ನು ತಕ್ಕೊಂಡು ಮಾಡಿದ ಡೊಳ್ಳವನಾ
ಚರ್ಮವ ತಕ್ಕೊಂಡು ಡೊಳ್ಳಿಗೆ ಹಾಕಿದ ಕರುಳು ಹಗ್ಗವ ತಾ ಮಾಡಿದನು
ಘೋರನ ಬಿಟ್ಟನು ಕೈಗಳ ಕಿತ್ತನು ಡೊಳ್ಳಿನ ಗುಣಿಗಳ ಮಾಡಿದನಾ
ನಡಕೆ ಕಟ್ಟಿ ಹರಿ ಬಡಕೊಂಡ ನಿಂತನು ನುಡಿದಿತು ಅದ್ಭುತನಾದವನಾ
ನಾದಿನ ಶಬ್ದವು ಮಹದೇವಗಾನಂದವಾದದು ನಾನೇನು ಹೇಳುವೆನಾ
ಹರಿ ಡೊಳ್ಳು ಬಡದ್ಹಾಂಗೆ ಹರ ತನ್ನ ನಾಟ್ಯವ ಪರಿಪರಿಯಿಂದಲಿ ಮಾಡಿದನು
ಪಾರ್ವತಿದೇವಿಗೆ ಅರಿವು ಆಗಲೆಂದು ಹಾಡ್ಯಾಡಿ ಡೊಳ್ಳುಬಡಿಯುವನು
ಸ್ವಾಮಿಯು ನಮ್ಮಯ್ಯ ಬಂದಾನು ಎಂಬುದು ಆವಾಗ ಹುಟ್ಟಿತು ಕೇಳಿರಿನ್ನು
ಅದ್ಭುತನಾದವು ಬಿದ್ದಿತು ಡೊಳ್ಳಿನ ಶಬ್ದವು ಕೇಳಿರಿ ಹೇಳುವೆನು
ಡೊಳ್ಳಿನ ಬಡಿತಕ್ಕೆ ಸೀಳಿತು ಭೂಮಿ ಸುಳ್ಳಲ್ಲ ಕೇಳಿರಿ ಹೇಳುವೇನು
ಸಾಕಾಗಿ ನಾದವು ಆಕಾಶ ತುಂಬಿತು ಏಕಾಂತ ಕೈಲಾಸ ಕೇಳಿತಿನ್ನು
ಸಾಕ್ಷಾತ್ ದೇವಿಗೆ ಈ ಕ್ಷಣ ಶಬ್ಧದ ಲಕ್ಷಣ ತೋರಿದು ಹೇಳುವೆನಾ
ಎಡಗಣ್ಣು ಎಡಭುಜ ಬಡದ್ಹಾಂಗೆ ಹಾರ್‍ಯಾವು ತಡಿಯಾದೆ ಕೇಳ್ಯಾಳೊ ನಂದಿನ
ನಂದಿ ಅನ್ನುತ್ತಾನ ಚೆಂದಾಗಿ ಕೇಳು ಮಂದಾರಿಗಿರಿವಾಸ ಬಂದಿರುವಾ |
ಪರಮಾತ್ಮಗಿನ್ನು ಅರಿವು ಆಗಲೆಂದು ಹರಿಯು ತನ್ನ ಸ್ತೋತ್ರ ಕೊಂಡಾಡಿದನು
ಹರಿಹರ ಶಿವಶಿವ ಗುರುದೇವ ನೀ ಹೋಗಿ ಧರಿಯಲ್ಲಿ ಮರಮರ ಮರುಗುವುದೋ

ವಚನ

ಹರಿಯ ಬಾರಿಸಿದ ಡೊಳ್ಳಿನ ಶಬ್ದವು ಏಕಕಾಲಕ್ಕೆ ಕೈಲಾಸಕ್ಕೆ ಕೇಳಿಸಿತು. ಆಗ ಪಾರ್ವತಿಯು ನಾದದ ಶಬ್ಧವನ್ನು ಕೇಳಿದಳು. ಆದರೆ ಪಾರ್ವತಿಗೆ ಎಡಗಣ್ಣು ಎಡಭುಜ ಹಾರಿದವು. ಆಗ ನಂದೀಶನೊಡನೆ "ಏ ನಂದಿಯೇ! ಈ ಸುನಾದವು ಎಲ್ಲಿಂದ ಹೊರಡುವುದು" ಎಂದು ಕೇಳಿದಳು. ಆಗ ನಂದಿ "ಪರಮಾತ್ಮನ ದರ್ಶನಕ್ಕೆ ಹರಿಯು ಬಂದಿರಬಹುದು ಆದ್ದರಿಂದ ನಿನಗೆ ಅರಿವು ಆಗಲೆಂದು ಏನೋ ಪರಿಯನ್ನು ಮಾಡಿರಬಹುದು ಎಂದನು. ಆಗ ಪಾರ್ವತಿಯು ನಂದೀಶ್ವರನೊಡನೆ ನಾದಿನ ಶಬ್ಧವನ್ನು ಹುಡುಕುತ್ತಾ ಹೋಗುವಂಥಾರಾದರು.

ಪದ

ನಾದಿನ ಶಬ್ಧವು ಶೋಧಿಸಿ ಹುಡುಕುತ ಹೋದರು ಸಾಂಬನ ಸನ್ನಿಧಿಗೆ
ಸರ್ವಾಂತರ್ಯಾಮಿಯ ದರುಶನವಾದರು, ಹರುಷವಾದರು ತಮ್ಮ
ಮನದೊಳಗೆ ಮುಂದೋಗಿ ದೇವಿ ತಾ ವಂದನೆ ಮಾಡ್ಯಾಳು ಬಂದಿನ್ನು ಪರಶಿವಮೂರ್ತಿಗೆ ತಡಮಾಡಲಿಲ್ಲ
ಉರಿಗಣ್ಣು ತೆರೆದಾರು ಅಡಿಗಿತು ಉರಿಯು ಕ್ಷಣದೊಳಗೆ
ನಡುಗಣ್ಣು ಮುಚ್ಚಿ ತಾ ಕಡಿಗಣ್ಣು ತೋರಿದನು ಅಡಗಿತು ಉರಿಯಲ್ಲ ಕ್ಷಣದೊಳಗೆ
ವೀರಶೈವರಿಗೆ ವೀರನಾಗಿ ತೋರ್‍ಯಾನು ತಾನು ಪರಶಿವನು
ಧರಿಯೊಳಗೆ ವೀರಸುತನಾದ ಬೀರನು ತಾನಾದ ಪೀರನಾದ ಮುಸಲ್ಮಾನರಿಗೆ
ಕುರುಬರು ಕುಲವನ್ನು ನಿರ್ಮಿಸಿ ಡೊಳ್ಳನ್ನು ಕರದಿನ್ನು ಕೊಟ್ಟನು ಅವರೊಳಗೆ
ಅಷ್ಟವಾಲಗದಲ್ಲಿ ಶ್ರೇಷ್ಠವಾದ್ಯವೆಂದು ಗಟ್ಟ್ಯಾಗಿ ಹೇಳ್ಯಾನು ಕುರುಬರಿಗೆ
ಕೆಟ್ಟಕಾರ್ಯಕೆ ಡೊಳ್ಳು ಮುಟ್ಟಬಾರದು ನೀವ್ ಕೆಟ್ಟುಹೋದಿರಿ ನಿಮ್ಮ ಕುಲದೊಳಗೆ
ಬೋಧಿಸಿ ಕೈಲಾಸದ ದಾರಿಯ ಹಿಡಿದರು ವಾದಿಸಬಾರದು ಇದರೊಳಗೆ
ಹಾಸ್ಯ ಮಾಡಿದಂಥ ಹೇಸಿ ಮನುಜರೆಲ್ಲ ನಾಶಾಗಿ ಹೋದಿರಿ ನಿಮ್ಮೊಳಗೆ
ಪೊಡವಿಯೊಳ್ ಮಂಟೂರು ವಾಡಿಯ ವಾಲ್ಮೀಕೇಶ
ಬಿಡದೆ ನಿಮಗೆ ನಾ ವಂದಿಸುವೆ
ನಾ ತಡಮಾಡದೆ ಅಡಿಗೆರಗುವೆನು ||
|| ಸ್ವಾಮಿ ||

ವಚನ

ಏ ಬುದ್ಧಿಯುಳ್ಳ ಕುರುಬರೇ ಅಂದ್ಹಾಗೆ ನಮ್ಮ ಡೊಳ್ಳು ಹುಟ್ಟಿತು. ಚೆಂದಾಗಿ ಕೇಳಿದರೆ ಬಂದ ಪಾಪವು ಪರಿಹಾರವಾಗುತ್ತದೆ. ಆದರೆ ರಕ್ಕಸನ ಉದರವೇ ಡೊಳ್ಳಾಯಿತು. ಈ ಮಾತು ಸುಳ್ಳಲ್ಲ. ಪಾರ್ವತಿಯು ಪರಮಾತ್ಮನ ಹತ್ತಿರಕ್ಕೆ ಬರುವಾಗ ಕೈಲಾಸ ಮಂದಿರದಲ್ಲಿ ಷಣ್ಮುಖನನ್ನು ಬಿಟ್ಟು ಬಂದಿದ್ದಳು. ಆದ್ದರಿಂದ ಮಗನ ನೆನಪಾಯಿತು. ಆಗ ಮೊಲಿ ಜುಂ ಎಂದು ಮೊಲಿ ಹಾಲು ನೆಲಕ್ಕೆ ಬೀಳುವಂತಾದವು. ಆಗ ಪಾರ್ವತಿಯು ಅಯ್ಯೋ ನನ್ನ ಮೊಲೆ ಹಾಲು ವ್ಯರ್ಥವಾಗುವುದೆಂದು ಎಡದ ಮೊಲಿ ಹಾಲಿನ ಮಣ್ಣಿನಿಂದ ಆದಮ್ಮನನ್ನು ಬಲದ ಮೊಲೆ ಹಾಲಿನ ಮಣ್ಣಿನಿಂದ ಆದಿಗೊಂಡವನ್ನು ನಿರ್ಮಿಸಿ ಅವನಿಗೆ ಈ ಡೊಳ್ಳನ್ನು ಕೊಟ್ಟು ಅದೃಶ್ಯರಾದರು.

**ಹಾಡಿನ ಕಥೆಗಳು**

ಮುದಿಮಲ್ಲಪ್ಪನವರು ಹಾಡಿದ ಹಾಡುಗಳಾದ ಬಾಳುಬದುಕಿರೆಂದು ಹರಸವ್ವ, ಬೀರೆದೇವರು, ಭರಮಣ್ಣ, ಈರಪ್ಪ, ರೋಣದಹಾಡು, ದೇವಿಹಾಡು, ರೇವಣಸಿದ್ಧ, ಕುರುಬರು, ಕಾಮವ್ವ-ಸೂರವ್ವ, ಹಡಗಲಿ ಹಾಲಸ್ವಾಮಿ, ಕ್ವಾಣನಬ್ಯಾಟಿ, ಮಳೆರಾಯ, ಜೋಳ್ಯಾಸುರನ ಪದ ಈ ಎಲ್ಲಾ ಹಾಡುಗಳಲ್ಲಿ, ನಿರೂಪಣೆಯಲ್ಲಿ ಸರಳತೆ, ಸಹಜತೆಯನ್ನು ಕಾಣಬಹುದು. ಪ್ರಾಸಾದ ಬೆಡಗು ಮತ್ತು ಸ್ವಾರಸ್ಯಪೂರ್ಣ ಅರ್ಥಗಳು ಸಮನ್ವಯವಾಗಿ ಕಂಗೋಳಿಸುವ ಹಾಡುಗಳು ತ್ರಿಪದಿ ಹಾಗೂ ದ್ವಿಪದಿಯಲ್ಲಿ ರಚನೆಗೊಂಡು ಪ್ರಾದೇಶಿಕ ಜನಪದ ಸಾಹಿತ್ಯದ ಸೌಂದರ್ಯತೆಯಲ್ಲಿ ಜನಪದ ನುಡಿಗಳ ಮೂಲ ಸೊಗಡನ್ನು ಕಾಣಬಹುದು. ಹಾಗೂ ಈ ಎಲ್ಲಾ ಹಾಡುಗಳ ಕಥಾ ಸಾರಾಂಶವನ್ನು ಕೊಡಲಾಗಿದೆ.

**೨. ಬಾಳಿಬದುಕಿರೆಂದು ಹರಸವ್ವ**

ಬಾಳಿಬದುಕಿರೆಂದು ಹರಸವ್ವ ಎಂಬ ಪ್ರಸ್ತುತ ಹಾಡಿನ ಕಥಾರೂಪವು ಹೀಗಿದೆ. ಮುದಿಮಲ್ಲಪ್ಪನವರ ಆರಾಧ್ಯದೇವತೆಯಾದ ಸೊಲ್ಲಮ್ಮದೇವಿಯ ಆರ್ಶೀವಾದದಿಂದ ದೊಡ್ಡದೊಡ್ಡ ದೇಶಗಳಿಗೆ ಹೋಗಿ ಡೊಳ್ಳಿನ ಪ್ರದರ್ಶನ ನೀಡಿ ಬಂದಿರುವುದನ್ನು ಹಾಡಿನ ಮುಖಾಂತರ ತಮ್ಮ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಸೊನ್ನದ ಸೊಲ್ಲಮ್ಮದೇವಿಯೇ ಬಿತ್ತನೆಗೆ ಬಾರದೆ, ಭೂಮಿಯಂತಿರುವ ನಮ್ಮನ್ನು ಒಳ್ಳೆಭೂಮಿಯನ್ನಾಗಿ ಮಾಡಿ ನಮ್ಮನ್ನು ಹರಿಸಿ ಕಳಿಸಿರುವೆ ಎಂದು ಬೇಡಿಕೊಂಡಿರುವರು. ನಮಗೆ ನೀನು ಆಶೀರ್ವಾದ ಮಾಡಿ ಹಂಪಿಯಿಂದ ದೆಹಲಿಗೆ ಕಳುಹಿಸಿ, ಹೆಸರುಗಳಿಸಿ ಕಲೆಯನ್ನುಳಿಸಿ ಬಾ ಎಂದು ಕಳುಹಿಸಿರುವೆ. ಕಡಿಮೆಯಿದ್ದ ನಮ್ಮ ಕಲೆಯ ಪ್ರಚಾರವನ್ನು ಹೆಚ್ಚಿಗೆ ಪ್ರಚಾರಮಾಡಿ ಬೆಂಗಳೂರು, ಮೈಸೂರುನಲ್ಲಿ ನಮ್ಮ ಕಲೆಯನ್ನು ಪ್ರದರ್ಶಿಸುವಂತೆ ಮಾಡಿದ್ದಕ್ಕಾಗಿ ನಿನ್ನ ಧ್ಯಾನದೊಳಗೆ ನಾವು ಬಾಳುವೆಯನ್ನು ಮಾಡುತ್ತಿರುವೆವು. ನಮ್ಮ ಕಲೆಯನ್ನು ಪರದೇಶಗಳಿಗೆ ಹೋಗಿ ತೋರಿಸಲಿಕ್ಕೆ ಕೈಹಿಡಿದು ನಡೆಸಿ, ಬಾಳಿಬದುಕಿರೆಂದು ನಮ್ಮನ್ನು ಹರಸುತಾಯೇ ಎಂದು ಹಾಡಿದ್ದಾರೆ.

**೩. ಬೀರೆ ದೇವರು**

ಬೀರೆ ದೇವರೆಂಬ ಪ್ರಸ್ತುತಹಾಡು ಕುರುಬರ ಮನೆದೇವರಾದ ಬೀರಪ್ಪನ ಮಹಿಮೆಯನ್ನು ವರ್ಣಿಸಲ್ಪಟ್ಟಿದೆ. ಆದಿತ್ಯವಾರ ಉದಯಕಾಲಕ್ಕೆ ಎದ್ದು ಜನರು ಅರಸನ ಬಳಿಗೆ ಬರಲಿಕ್ಕೆ ಅಂಜುತ್ತಾ, ಅಳುಕುತ್ತಾ ಅರಸನ ಅಂಗಳಕ್ಕೆ ಬಂದು ಒಂದು ಸೋಜಿಗವನ್ನು ಕಂಡರು ಮತ್ತು ಅಂಗಳದ ಸುತ್ತ ಇರುವ ಒಂದು ಪೌಳಿಯನ್ನು (ಪ್ರಾಂಗಣ) ಕಂಡರು. ಆ ಪೌಳಿಯ ಒಳಗೆ ತಮ್ಮ ನೆಚ್ಚಿನ ಲಿಂಗವನ್ನು ಕಂಡರೂ ಲಿಂಗವನ್ನು ನೋಡಲು ಇಚ್ಛಿಸದೇ ಮುತ್ತು, ಮಲ್ಲಿಗೆ, ದವನಾವನ್ನು ಹಾಕಿ ಸಿಂಗರಿಸಿದ ಲಿಂಗವನ್ನು ಕಂಡರು. ಮುನಿಯಸೂರನ ಮಂಡಿಯ (ತಲೆ) ಮೇಲೆ ಕಿಲಿಕಿಲಿ ಕಿರಿಮಾಡುವಳನ್ನು ತನ್ನ ಜಡೆಯೊಳಗೆ ಕಟ್ಟಿ ಸುರಿಮಂಡಲನ್ನೆಲ್ಲ ಕಟ್ಟಿ ಸತ್ತಿಗಿ ನೆರಳಿಗೆ ನಿಂತುಕೊಂಡ ದೇವರೇ ನಿನ್ನಭಕ್ತರು ಬಂದು ಕರೆದರೆ ಅವರ ಕರೆಗೆ ಓಗೊಡು. ಒಕ್ಕಲು ಮಾಡುವ ಊರ ಅಗಸಿಯಾಗ, ದಾಳಿಂಬರ ವನದಾಗೆ ನಡೆಯುವ ಸಭೆಯಲ್ಲಿ ದೇವಿಯಂದರೆ

ಯಾರು ಹೇಳು? ದೇವರೆಂದರೆ ಯಾರು ಹೇಳು? ಎಂದು ಪ್ರಶ್ನಿಸಿದಾಗ ದೇವಿಯೆಂದರೆ ಪಾರ್ವತಿದೇವಿ, ದೇವರೆಂದರೆ ಪರಮೇಶ್ವರನು. ಆ ನಮ್ಮ ಬ್ರಹ್ಮಲಿಂಗನೇ ಆ ಶಸ್ತ್ರಮುಖದ ಬೀರಣ್ಣನು ಎಂದು ಪ್ರಸ್ತುತ ಹಾಡಿನಲ್ಲಿ ವರ್ಣಿಸಲಾಗಿದೆ.

**೪. ಮಳೆರಾಯ**

ಮಳೆರಾಯ ಎಂಬ ಪ್ರಸ್ತುತ ಹಾಡಿನ ಕಥಾರೂಪದಲ್ಲಿ ಮಳೆರಾಯನ ಕೃಪೆಯನ್ನು ವರ್ಣಿಸಲಾಗಿದೆ. ಮಳೆಗಾಳಿಗಳಿಲ್ಲದೆ ಮೋಡಗಳೆದ್ದವು, ಸುಳಿಗಾಳಿಲ್ಲದೆ ತಿರುಗಿ ವಜ್ರದ ಕೀಲ ಸಡಿಲಿಸಿ ಮಳೆದೇವನು ಭೂಮಿಗೆ ಬಿದ್ದನು. ಇದರಿಂದ ಗುಡ್ಡಗಳೆಲ್ಲವೂ ಹಸಿರಾದವು, ಭೂಮಿಗೆ ಬಿದ್ದ ಮಳೆಯನ್ನು ಕಂಡು ಜನರು ಎತ್ತುಗಳನ್ನು ಜೋಪಾನಮಾಡಿ ಬಿತ್ತುವ ಬೀಜಗಳನ್ನು ಜತುನಾ ಮಾಡಿಕೊಂಡರು. ಮತ್ತು ಬಿತ್ತಲು ಸೆಡ್ಡಿ ಬಟ್ಟಲು, ಶರಕಮಿಣಿ, ಎಡಿನೊಗಯಿಟ್ಟು, ಕೂರಿಗಿಯನ್ನು ಪೂಜೆಮಾಡಿದನು. ಉಡಿಯಲಿ ಉಡಿಬೀಜ, ಹಿಡಿಯಲಿ ಹಿಡಿಬೀಜ, ಎತ್ತುಗಳನ್ನು ಹೊಡೆಯಲು ಬಾರಿಕೋಲನ್ನು ಹೆಗಲಲ್ಲಿ ಹಾಕಿಕೊಂಡು ಜಳಜಳ ಬಿತ್ತಿದನು.

ಹಂಡ ಎತ್ತಿನ ಹಗ್ಗವ ಹಿಡಿದು ಗುಂಡು ಎತ್ತಿಗೆ ಒಮ್ಮೆ ಒಡೆದು ಜಳಜಳ ಬೀಜವ ಬಿತ್ತಿದನು. ಹಸಿಮಣ್ಣಿನಲ್ಲಿ ಸಸಿನಾಟಿ ಬರುವಂತೆ ಹಸನಾಗಿ ಬೆಳೆಯೋ ಭೂಮಿತಾಯತ್ವ. ನಿನ್ನ ಹಸುರಂತ ಕಾಲಂದಾಡಿದವು. ಹಾಲುತುಂಬಿ ಹದ ಮೀರಿದ ಬಳಿಕ ಹಾಲುತುಪ್ಪ ಚೆಲ್ಲಾಡಿದವು. ನಾಲ್ಕು ಮೂಲಿಗೆ ಮಂಚಿಗಿ ಹಾಕಿ, ಕೌಣಿ (ಕಾಣ್ವಿ)ಯಲ್ಲಿ ಗುಬ್ಬಿಕಾದನು. ಬೆಳೆದ ಪೈರನ್ನು ಕುಡುಗೋಲು ತೆಗೆದುಕೊಂಡು ಬುಡಕ್ಕೆ ಕೊಯ್ದು, ಸಿವುಡುಗಳನ್ನು ಕಟ್ಟಿ ಗೂಡುಹಾಕಿದನು. ಕಣವನ್ನು ಮಾಡಿ ತೆನಿಗಳನ್ನು ಮುರಿಸಿ, ಸುತ್ತ ಕಣಕ್ಕೆ ದಿಂಡ ಕಟ್ಟಿದನು. ತೆನಿಗಳನ್ನು ತುಂಬಿ ಕಣಕ್ಕೆ ಹರವಿ ರೂಲು ಗುಂಡನ್ನು ಹೂಡಿಕೊಂಡು, ಒಕ್ಕಲಿಗ ಹಾಡುಹೇಳುತ್ತಾ, ಹೂಲೂಗ್ಯ ಎನ್ನುತ್ತಾ ರೂಲು ಹೊಡೆದನು. ನಂತರ ಕರಿಕಿಯನ್ನು ಎಳೆದು ಸುಂಕದರಾಶಿ ಮಾಡಿದನು. ಮೂರುಕಾಲಿನ ಮೆಟ್ಟವನು ಹಾಕಿ ಸುಂಕದ ರಾಶಿ ತೂರಿದನು. ರಾಶಿತುಂಬಿ ಮೇಟಿಗೆ ಹಾಕಿ ಮೋಜು ಮಾಡಿ ರಾಶಿ ಕಟ್ಟಿದನು. ರಾಶಿಗೆ ಪೂಜೆಮಾಡಿ ಎಡೆ ಹಿಡಿದು, ರಾಶಿ ಮುಗುಚಿ ಚೀಲುಕ್ಕೆ ತುಂಬಿ ಬಂಡಿಗೆ ಹಾಕಿ, ಬಸವಣ್ಣನನ್ನು ಹೂಡಿಕೊಂಡು ಮನೆಗೆ ರಾಶಿ ತಂದನು. ಬಸವಣ್ಣನಿಗಿಂತ ತಿಳಿದವನಾರು? ಶಿವನಿಗಿಂತ ದೊಡ್ಡವ ಯಾರು? ಶಿವನಿಗಿಂತ ಶಿವಶರಣರಾಧಿಕರೆಂದು ತಿಳಿದು ನಾನು ಅವರಿಗೆ ವಂದಿಸುವೆ. ಎಂದು ವರ್ಣಿಸಲಾಗಿದೆ.

**೫. ಭರಮಣ್ಣ**

ಪ್ರಸ್ತುತ ಹಾಡಿನಲ್ಲಿ ಭರಮಣ್ಣನ ಕುಚೇಷ್ಟೇಯ ವರ್ಣನೆಯಿದೆ. ದಮ್ಮಿನಾಳು ಎಂಬ ಊರಿನ ಭರಮಣ್ಣನು ಸುಮ್ಮನೆ ಬರುವುದಿಲ್ಲ. ಆಡುವ ಮಕ್ಕಳನ್ನು ಅಳಿಸುತ್ತ, ಓದುವ ಮಕ್ಕಳನ್ನು ಕೆಡಿಸುತ್ತಾ ಮುಂದೆ ಬಂದು, ಒಬ್ಬ ಸ್ತ್ರೀಯನ್ನು ಕಂಡು ಮದುವೆಯಾಗಬೇಕೆಂದನು. ಆಗ ಊರಿನವರು ಅಂಗಳದಾಗ ಆಡುವ ತಂಗಿ ಸೂರವ್ವ ಎಂಬ ಕನ್ಯೆಯ ಅಂಗೈಯಲ್ಲಿರುವ ಗೆರೆಗಳನ್ನು ನೋಡಿ ಒಂಟಿಸುಳಿ, ಗಂಟಿಯ ಮುತ್ತು ನೋಡಿ ಸಂತವುಳ್ಳ ಹೆಣ್ಣೆಂದು ಭರಮಣ್ಣನಿಗೆ ತಗೆದುಕೊಂಡರು. ನಂತರ ಹಸಿರುಗಂಬ, ಹಾಲಗಂಬ

ಗಗನಕ್ಕೆ ಚಂದವಾಗಿರುವಂತೆ, ಗಗನಕೆ ಚಂದವಾಗಿರುವಂತಹ ಹಂದರವನ್ನು ಮಾಡಿ ಅದರಡಿಯಲ್ಲಿ ಭರಮಣ್ಣನ ಮದುವೆಯನ್ನು ಮಾಡಿದರು. ಎಲೆಯಲ್ಲಿ ಹೋಳಿಗೆ, ಸ್ವಾರಿಯಲ್ಲಿ (ಗಡಿಗಿ) ಬಾನಮಾಡಿ ಅದರ ಮೇಲೆ ನೊರೆಹಾಲು ಸುರುವಿ ಹೆಂಡತಿ ಸೂರವ್ವನ ಮೇಲೆ ಸುರಿದನು. ಐದುಮಂದಿ ಸ್ತ್ರೀಯರು ಕೂಡಿ ಆರತಿ ಮಾಡಿರಿ ಎಂದು ಹಿರಿಯರು ಹೇಳಿದರು. ಐದುಮಂದಿ ಸ್ತ್ರೀಯರು ಆರತಿ ಮಾಡಿ "ಅಲ್ಲಿಟ್ಟಿದ್ದಾರೆ, ಅದನ್ನು ತೆಗೆದುಕೊಂಡು ಗಂಡನಿಗೆ ಆರತಿ ಮಾಡೆಂದು" ಹೇಳಿದರು. ಆಗ ಸೂರವ್ವ ಎದ್ದು ಮೊದಲು ಸೂರ್ಯ ಮತ್ತು ಚಂದ್ರನಿಗೆ ಬೆಳಗಿದಳು. ಆಗ ಐದು ಮಂದಿ ಸ್ತ್ರೀಯರು ಸೇರಿ "ಸೂರ್ಯ - ಚಂದ್ರರು ನಿನ್ನ ಒಡೆಯರೇ" ಎಂದು ಕೇಳಿದರು. ಆಗ ಸೂರವ್ವ ಸೂರ್ಯನಿಗಿಂತ ಬೆಳಕು ಯಾರವ್ವ? ಚಂದ್ರನಿಗಿಂತ ಖಳಯಾರವ್ವ? ಎಂದು ಕೇಳಿ ನಾನು ಚಂದ್ರನಿಗಿಂತ ಖಳ ಹೊಂದಿದ ಪುತ್ರವನ್ನು ಕೊಡು ಅಂತ ನಾನು ಬೇಡಿಕೊಂಡೆನು ಎಂದು ಹೇಳಿದಳು. ಹೀಗೆ ಭರಮಣ್ಣನ ಮದುವೆಯ ಸಂಭ್ರಮದ ಬಗ್ಗೆ ಪ್ರಸ್ತುತ ಹಾಡಿನಲ್ಲಿ ವರ್ಣಿಸಿದೆ.

**೬. ಕಾಮವ್ವ - ಸೂರವ್ವ**

ಪ್ರಸ್ತುತ ಹಾಡಿನಲ್ಲಿ ಕಾಮವ್ವ - ಸೂರವ್ವರ ತವರುಮನೆಯ ಪ್ರತಿಷ್ಠೆ ಬಗ್ಗೆ ವರ್ಣಿಸಲಾಗಿದೆ. ಮರದಿಂದ ತಯಾರಿಸಿದ ಒನಕೆಗೆ ಹುರಿಗೆಜ್ಜೆ, ರ್‍ಯಾವಳ ಬಿಗಿದು ಮರಕ್ಕೆ ಮುತ್ತಿನ ಜಲ್ಲೆಯನ್ನು ಬಿಗಿದು ಸುವ್ವಿ ಸುವ್ವೆಂದು ಬಾಲಿ (ಹುಡುಗಿ) ಹಾಡುವಳು. ಹೀಗೆ ಹಾಡುವ ಬಾಲಿಯನ್ನು ಅತ್ತಿಗೆ, ನಾದಿನಿಯರು ಒದೆದರು. ಆಗ ಬಾಲಿ "ಯಾಕವ್ವ ಅತ್ತಿಗೆ ನಾ ಮಾಡಿದ ತಪ್ಪಾದರು ಏನು ಹೇಳು?" ಎಂದು ಕೇಳುವಳು. ನನ್ನ ತಮ್ಮ ಚನ್ನಿಗನಾದ ಬೀರ ನನ್ನ ಮುಂಗೈಗಳಿಗೆ ಬಳೆಗಳನ್ನು ಹಿಡಿಸಿರುವನು. ನನ್ನ ತಮ್ಮನು ಮಾಡಿದ ಈ ಪುಣ್ಯವನ್ನುಂಡು, ನಿನ್ನ ತಮ್ಮನದೆಂದು ಹಾಡುವಳು. ನನ್ನ ಏಳುಬಳಗದವರು ಮಾಡಿದ ಪುಣ್ಯವನ್ನು ನಿನ್ನ ಏಳು ಬಳಗದೆಂದು ಹಾಡುವಳು. ನಮ್ಮಪ್ಪನ ಬಳಗದ ಪುಣ್ಯವನ್ನಂಡು, ನಿಮ್ಮಪ್ಪನದೆಂದು ಹಾಡುವಳು. ನಮ್ಮವ್ವನ ಬಳಗದ ಪುಣ್ಯವನ್ನುಂಡು, ನಿಮ್ಮವ್ವನದೆಂದು ಹಾಡುವಳು. ಯಾಲಕ್ಕಿ ತಳಸುತ್ತಾ, ಬಾಲಕನ ಮೇಲೆ ಒಂದು ಹಾಡು ಹೇಳುವಳು. ಅಕ್ಕಿಯ ತಳಸುತ್ತಾ ಸಿಕ್ಕನ್ನು ಪಾಡುತ್ತಾ, ಚಿಕ್ಕಮೈದುನರ ಮೇಲೆ ಒಂದುಹಾಡನ್ನು ಹಾಡುವಳು. ಅರಿಶಿಣವನ್ನು ಹರಡುತ್ತಾ, ಪುರುಷಾಂಗನನ್ನು ಹೇಳುತ್ತಾ ಒಂದು ಹಾಡು ಹಾಡುತ್ತಾಳೆ. ಅಂಕಣವನ್ನು ಹರಡುತ್ತಾ, ಕುಂಕುಮವನ್ನು ಸೋಸುತ್ತಾ ಒಂದು ಹಾಡನ್ನು ಹಾಡುವಳು. ಚದುರಿಕಾಮವ್ವ ನಿನ್ನ ಸೀರಿ ನೀರಿಗೆಲ್ಲಾ ಬಣ್ಣದವು, ಪದರು ಪದರಿಗೆಲ್ಲಾ ಕ್ಯಾದಗಿ ಮತ್ತು ನಿನ್ನ ತಲೆ ತುರುಬಗಂಟಿನ ಮೇಲೆ ಮುನ್ನೂರ ಅರವತ್ತು ಕ್ಯಾದಿಗಿ. ಬಳಕುವ ನಿನ್ನ ನಡುಗೆಗೆ ಲಳಿಕೆಯ ಒಡ್ಡಣಿಗೆ, (ಕಾಲು) ಕಲಕ ಕಟ್ಟಿನ ಕಾಲುಂಗುರುವು, ಬಾಗುವನಿನ್ನ ನಡುವಿಗೆ ತೂಗುವ ಹುವ್ವಾಲೆ ಇದ್ದರೂ ನಾಗರ್‍ಹೆಡಿ ಚಿಂತೆ ಯಾಕೆ? ಹಸನುಳ್ಳ (ಒಳ್ಳೆಯ) ಹೆಣ್ಣಿಗೆ ಕಸುಲಾದ ಮೂಗುತಿ ಮತ್ತು ನಸುಳಗೆಂಪಿನ ಮಣಿಸರ, ಗಂಜಿಹಾಕಿದ ಸೀರೆ, ಗಂಧದ ಇಳೇವು ತಗೆದುಕೊಂಡು ಮಡದಿಯಾಗಿ ಮಂಚಕಬರುವ ಸೂರವ್ವನ ಕಂಚಿನಗಂಟೆ ಕೋಲೊಯ್ದುವು. ಹೀಗೆ ಹೇಳಪ್ಪ ನಮ್ಮ ಗುರುವಿನ ಮುಂದೆ ಸಂದಿ ಸಂದಿನ ನುಡಿಗಳನ್ನು ಕೇಳು ತಂದೆ ಮಾಳಿಗರಾಯನೆ ಎಂದು ವರ್ಣಿಸಲಾಗಿದೆ.

## ೭. ದೇವಿಹಾಡು

ದೇವಿಹಾಡು ಎಂಬ ಪ್ರಸ್ತುತ ಹಾಡಿನಲ್ಲಿ ದೇವಿಯ ಮಹಿಮೆಯನ್ನು ವರ್ಣಿಸಲಾಗಿದೆ. ಕೂಸನ್ನು ಹೊತ್ತುಕೊಂಡು ಗುಲ್ಪಟ್ಟಿಯನ್ನು ಹೊತ್ತುಕೊಂಡು ಊರವ್ವ ಒಂದು ರೂಪವನ್ನು ತಾಳಿ ಊರೆಲ್ಲಾ ಆಡುತ್ತಾ ಹೊರಟಳು. ಎಳೆಕಾಯಿಯಂತಿರುವ 'ಕಳುಭಾವ'ನ್ನು ಒಳ್ಳೆಯವರಿಗೆ ಹರಡಿ ಅವರ ಮನೆಯಲ್ಲಿರುವ ಮಲ್ಲಿಗೆಯಂತೆ ಕಾಣುವ ಒಂದು ಕೋಣವನ್ನು 'ಹರಕೆಗೆ' ಬಿಡಿಸಿದಳು. ಹೆಸರುಕಾಯಿಯಂತಿರುವ 'ಹಸುಭಾವ'ನ್ನು ಹಸುಮಕ್ಕಳಿಗೆ ಹರಡಿ 'ಮೊಸಳೆಯಂತಿರುವ ಕೋಣ'ವನ್ನು ಹರಕೆಗೆ ಬಿಡಿಸಿದಳು. ಆರುಕಾಲಿನ ಏಣಿಯನ್ನು ಏರಿ ಊರಗೌಡನ ಮನೆಯನ್ನು ನೋಡಿದಳು. ಊರಗೌಡನ ಮನೆಯ ಆರತಿ ಬರುವುದು ತಡವಾದುದನ್ನು ಕಂಡು ಹನ್ನೆರಡು ವರ್ಷದ 'ಹೆಣ್ಣುಂಡ ಕೋಣವನ್ನು' ಸಣ್ಣಮಿಣಿಯನ್ನು ಹಾಕಿ ಹಿಡಿಯಿರಿ ಎಂದು ಹೇಳಿದಳು ಮತ್ತು ಇಪ್ಪತ್ತು ವರ್ಷ 'ತುಪ್ಪುಂಡು (ಕೊಬ್ಬಿದ) ಕೋಣವನ್ನು ಜತ್ತಿಮಿಣಿಯಾಕಿ ಹಿಡಿಯಿರಿ ಎಂದಳು. ಮತ್ತು ಕೋಣವನ್ನು ಹಿಡಿದುಕೊಂಡು ಹೋಗಿ ಅದರ ಕೊರಳನ್ನು ಕೊಯ್ಸಿದಳು. ಕೋಣದ ನೆತ್ತರ (ರಕ್ತ)ದಲ್ಲಿ ಓಕುಳಿ ಯಾಡುತ್ತಾ ಛತ್ತರಿ (ಕೊಡೆ) ನೆರಳಲ್ಲಿ ನಿಂತಳು. ನೆರಳಾಗ ನಿಂತಿರುವ ಊರಮ್ಮ ನಿನ್ನ ಕರೆದರೆ ಓ ಎನ್ನು, ಊರಮ್ಮ ಓ ಎನ್ನಲಿಲ್ಲದಿದ್ದರೆ ದೇವಿ ತಪ್ಪಿಸಿಕೊಂಡು ವನದಾಗ ಮತ್ತು ಬಾಳಿಗೊನೆಯಾಗ ಇದ್ದು ಅಲ್ಲಿಂದ ದೇವಿದೇವರ ಶಬ್ದ ಕೇಳಿಸಿತು. ದೇವಿ ಎಂದರೆ ಪಾರ್ವತಿದೇವಿ ಶಾಸ್ತ್ರಮುಖಕ್ಕೆ ಊರಮ್ಮ ಮತ್ತು ದೇವರೆಂದರೆ ಪರಮೇಶ್ವರನು ಶಾಸ್ತ್ರಮುಖಕ್ಕೆ ಬೀರಣ್ಣ ಎಂದು ವರ್ಣಿಸಿದ್ದಾರೆ.

## ೮. ಕುರುಬರು

ಕುರುಬರು ಎಂಬ ಪ್ರಸ್ತುತ ಹಾಡಿನಲ್ಲಿ ಕುರುಬರ ಸತ್ಯ ಮತ್ತು ನಿಷ್ಠತೆಯ ಬಗ್ಗೆ ವರ್ಣಿಸಲಾಗಿದೆ. ಏಣಿಕಲ್ಲಿನಿಂದ ನಿರ್ಮಿಸಿದ, ಸುಣ್ಣದಿಂದ ಬಳೆದು ಅಲಂಕಾರ ಮಾಡಿದ 'ದೊಡ್ಡವಾಡಿ' ಗ್ರಾಮದ ಏಳುಕಲ್ಲಪ್ಪನ 'ಭಂಡಾರ' ಎಂದು ಹೇಳಿದ್ದನ್ನು ತಿಳಿದು ತನ್ನ ಮಂಡಿಯೂರಿ ಅದನ್ನು ತೆಗೆದುಕೊಂಡು ನಿಂಗಣ್ಣನು ಒಪ್ಪಿಗೆ ನೀಡಿದನು. ಒಪ್ಪಿಕೊಂಡಮೇಲೆ ನಿಂಗಣ್ಣನು ಕುರಿಯ ಹಿಂಡಿನ ಕಡೆಗೆ ಹೋದನು. ಅಲ್ಲಿ ಆಳುಮಗನಾದ ಮಲ್ಲಣ್ಣನನ್ನು ಕರೆದು ಮುಂದಲ ಮರಿಗಳನ್ನು ಮತ್ತು ಹಿಂದಲ ಮರಿಗಳನ್ನು ಜತನದಿಂದ ನೋಡಿಕೊಂಡು, ಹಿಂಡುವ (ಕರೆಯುವ) ಕುರಿಗಳನ್ನು ಹಿಂಡು ಮತ್ತು ಹಾಕಮರಿಗಳು ಹಾಕು (ತಾಯಿಮೊಲೆ ಉಣಿಸುವ ಮರಿಗಳು) ಎಂದು ತಿಳಿಸಿದನು. ಒಂದು ಕಾವಲಿಯಲ್ಲಿ ಹಾಲನ್ನು, ಇನ್ನೊಂದು ಕಾವಲಿಯಲ್ಲಿ ಗಿಣ್ಣದ ಹಾಲನ್ನು ಕರೆದು 'ಮಲ್ಲಣ್ಣ' ಎರಡು ಕಾವಲಿಗಳನ್ನು ಹೊತ್ತುಕೊಂಡು ಸುಮ್ಮನೆ ಮನೆಗೆ ಬಂದನು. ಮನೆಯಲ್ಲಿರುವ ತಾಯಿ ಮಾಕವ್ವ ಏಳು ಕೊಪ್ಪರಿಗೆಯಲ್ಲಿ ಕಾಯಿಸಿದ ನೀರಿನಲ್ಲಿ ನಿಂಗಣ್ಣನು ಸ್ನಾನಮಾಡಿ, ಬಟ್ಟೆಹುಟ್ಟು ತಾಯಿ ಮಾಡಿದ ಊಟವನ್ನು ಮಾಡಿ ಸಿಂಗಾರಗೊಂಡು ಬಂದನು.

ಆಗ 'ಡೊಳ್ಳ' ಬಡಿಯುವ 'ಈರ'ನನ್ನು ಕರೆಸಿ 'ಡೊಳ್ಳ'ನ್ನು ಅವನ ಕೈಯಲ್ಲಿ ಕೊಟ್ಟನು. ತಾಳ ಬಡಿಯುವ ಈರನನ್ನು ಕರೆಸಿ ಅವನ ಕೈಗೆ ತಾಳಗಳನ್ನು ಕೊಟ್ಟನು. ಕೊಳಲು ಊದುವ ಈರನನ್ನು ಕರೆಸಿ

ಕೊಳಲನ್ನು ಅವನ ಕೈಯಲ್ಲಿ ಕೊಟ್ಟನು. ವಿಭೂತಿಪಟ್ಟಿನ ಈರನನ್ನು ಕರೆಸಿ ಪಟ್ಟದ ದಟ್ಟಿಯನ್ನು ಉಡಿಸಿದನು. ನಿಶಾನಿ ಈರನನ್ನು ಕರೆಸಿ ನಿಶಾನಿ (ಭಾವುಟ) ಕೊಟ್ಟು ಏರಿಸಿರಿ ಎಂದನು. ಇಷ್ಟು ಮಂದಿ ಈರರು ಕೂಡಿಕೊಂಡು ಏಣಿಕಲ್ಲಪ್ಪನ ಗುಡಿಗೆ ನಡೆದರು. ನೂರೊಂದು ಈರರು ಕೂಡಿದ ಬಯಲಿನಲ್ಲಿ ನಿಂಗಣ್ಣನನ್ನು 'ಹಾಡು' ಎಂದರು. ಆಗ ನಿಂಗಣ್ಣನು "ಹಾಡಲಾರೇನು, ಹರಸಲಾರೇನು ಮತ್ತು ಚಾಜ (ಹಣ)ವನ್ನು ಬೇಡಲಾರೆನು" ಎಂದು ಹೇಳಿ ಗುಡಿಹಿಂದಕ್ಕೆ ಹೋಗಿ ಅಡಿಮಗ್ಗಲಲ್ಲಿ ಮಲಗಿದನು. ಆಗ ಏಣಿಕಲ್ಲಪ್ಪ ಈರರ ಸ್ನೇಹಮಾಡಿ ಪುನ: ಹಾಡಲು ನಿಂಗಣ್ಣನ್ನು ಕೇಳಿದರೂ ನಿಂಗಣ್ಣ ಇಲ್ಲವೆಂದು ಹೇಳಿ ಪುನ: ಗುಡಿ ಹಿಂದಕ್ಕೆ ಹೋಗಿ ಒರಗಿ ಕುಳಿತುಕೊಂಡನು.

'ಮನೆಯ ಮಗನೆಂದು ತಿಳಿದು ಭಂಡಾರ ಕೊಟ್ಟರೆ ಮಲಗಲಿಕ್ಕೆ ಬಂದೇನೋ ನಿಂಗಣ್ಣ, ವರವಿನ ಮಗನೆಂದು ತಿಳಿದು ಭಂಡಾರ ಕೊಟ್ಟರೆ ಗುಡಿಯ ಹಿಂದಕ್ಕೆ ಹೋಗಿ ಒರಗಲಿಕ್ಕೆ ಬಂದೇನೋ ನಿಂಗಣ್ಣ' ಎಂದು ಈರಗರು ಕೇಳಿದರು. ಆಗ ನಿಂಗಣ್ಣ ಭಂಡಾರ 'ಅಂದ್ರಿ' ಅದನ್ನು ಮಂಡಿಯೂರಿ ತೆಗೆದುಕೊಂಡೆನು ನಮ್ಮಪ್ಪ; ಇಂತಹ 'ಬಂಧನ' ಬರುವುದೆಂದು ನನಗೆ ಗೊತ್ತಿರಲಿಲ್ಲ. ಬಂಧನ ಬರುವುದನ್ನು ನಾನು ಕೇಳಿದ್ದರೆ ನಾನು ಉಂಡುಂಡು ಮನೆಯಲ್ಲಿ ಇರುತ್ತಿದ್ದೆ. ಹಾಲು - ಬಾನವನ್ನುಂಡು ಹಸುಮಂಚದ ಮೇಲೆ ಮಲಗುತ್ತಿದ್ದೆ, ತುಪ್ಪ - ಬಾನವನ್ನುಂಡು ಸುಪ್ಪತ್ತಿಗೆ ಮೇಲೆ ಮಲಗುತ್ತಿದ್ದೆನು ಎಂದಾಗ ಏಣಿಕಲ್ಲಪ್ಪ 'ನಾಲಿಗೆ' ತೆಗೆಯೇ ಲಕ್ಷಣಗೇಡಿ ಎಂದು ಗಂಟೆ ಅಕ್ಷರವನ್ನು ನಾಲಿಗೆ ಮೇಲೆ ಹೊಡೆದನು. ಹಾರರ ಅರಿದರ ಮಕ್ಕಳು ಬಿಳಿಕಾಗದದ ಮೇಲೆ ಓದಿದರು. ತುರುಕರಬಾಬಣ್ಣನ ಮಕ್ಕಳು ಮುಸ್ತಾಪದ ಮೇಲೆ ಓದಿದರು. ಆದರೆ ಕುರುಬರ ಬೀರಣ್ಣನ ಮಕ್ಕಳು ನಾಲಿಗೆಯ ಮೇಲೆ ಓದಿದರು. ಬಟ್ಟಿನೋಟು ಭಂಡಾರ ಕೊಟ್ಟರೆ ಬೆಟ್ಟ ಇಳಿದುನಾವು ನಿನ್ನ ಸೇವೆ ಮಾಡಲು ಬರವೆವು. ಕಾಸಿನೋಟು ಭಂಡಾರ ಕೊಟ್ಟರೆ ದೇಶ ಬಿಟ್ಟು ಬಂದು ನಾವು ನಿನ್ನ ಸೇವೆ ಮಾಡಲು ನಾವು ಬರುವೆವು ಎಂದು ಹೇಳುತ್ತಾರೆ.

### ೯. ಕ್ಯಾಣನ ಬ್ಯಾಟಿ

ಪ್ರಸ್ತುತ ಕ್ಯಾಣನಬ್ಯಾಟಿ ಹಾಡಿನಲ್ಲಿ ಬೀರಣ್ಣನು ಕೋಣದ ದಾಳಿಗೆ ಹೋಗುವ ಸನ್ನಿವೇಶ ಮತ್ತು ಬೀರಣ್ಣನ ಶೌರ್ಯವನ್ನು ವರ್ಣಿಸಲಾಗಿದೆ. ಮುಂಜಾನೆದ್ದುಕೂಡಲೇ ಜೀನರಣ್ಣ ಹೂವಿನ ತೋಟಕ್ಕೆ ಹೋದನು. ಅಲ್ಲಿ ತೋಟದ ಬಾಗಿಲು ತೆಗೆದಿದ್ದನ್ನು ಕಂಡನು. ಯಾವ ದೇಶದ ಕೋಣ ಬಂದು ಗಂಧದ ಮಡುವ ಕೆಡಿಸಿ, ಹೂವಿನ ವನವ ಬಡಿದು ಮಲ್ಲಿಗೆ ಗಿಡದಡಿ ಮಲಗಿದೆ. ಆಗ ಜೀನರಣ್ಣನು ಈ ಕೋಣವನ್ನು ಕೊಲ್ಲುವವರು ಯಾರು ಇಲ್ಲ ಎಂದು ತಿಳಿದು, ಒಡೆಯನ ಬಳಿಗೆ ಹೋಗಿ ಕೋಣದ ವಿಷಯವನ್ನು ತಿಳಿಸಿದನು. ಆಗ ಒಡೆಯನು ಅಂಜನಾದೇವಿಯ ಮಗನಾದ ಹನುಮಂತನಿಗೆ ಕೋಣದದಾಳಿಗೆ ಹೋಗಲು ತಿಳಿಸಿದನು. ಆಗ ಹನುಮಂತನು "ಎಲ್ಲಿಗಾದರೂ ಹೋದೇನು ಕೋಣದ ದಾಳಿಗೆ ಮಾತ್ರ ಹೋಗುವುದಿಲ್ಲ ಎಂದನು." ನಂತರ ಜೋಡೆರಡುಕಾಸಿ ವೀರಭದ್ರನಿಗೆ ಕೋಣದದಾಳಿಗೆ ಹೋಗು ಎಂದರು. ಇವನು ಸಹ ದಾಳಿಗೆ ಹೋಗಲಿಕ್ಕೆ ಹಿಂಜರಿದನು. ಆಗ ಒಡೆಯ ಎಷ್ಟು ಮಕ್ಕಳಿದ್ದರೇನು? ಮಾಡಬೇಕು. ವ್ಯಾಸದ ಮಗ (ಸ್ವಂತಮಗ) ಇಲ್ಲದ ಬಳಿಕ ಎಂದು

ಹೇಳಿಕೊಂಡು ದುಃಖಿಸಿ ಕಣ್ಣಿರತಂದನು. ಆಮೇಲೆ ಒಡೆಯನು ಜೀನರಣ್ಣನ ಮೂಲಕ ಜೋಡೆರಡು ಹಲಗೀಲೆ ಕುರುಬರ ಬೀರಣ್ಣನನ್ನು ಕೋಣದ ದಾಳಿಗೆ ಹೋಗಲು ತಿಳಿಸಿದನು. ತಂದೆ ಹೇಳಿದ ಮಾತಿಗೆ ಮಗನು ಮೀರುವುದಿಲ್ಲವೆಂದು ಹೇಳಿ ಬೀರಣ್ಣನು ಒಪ್ಪಿಕೊಂಡನು. ತೇಜಿನ ಜೀನು ಮಾಡಿಕೊಂಡು ಕೋಣದ ಬೇಟೆಗೆ ಹೊರಟನು. ಅಲ್ಲಿ ಹುಣಿಸೆಮರದ ನಡುವೆ ಇರುವ ಗಜುಗದ ಪಳಿಯ ಅಡಿಯಲ್ಲಿ ದೇವಿದಿಂಬಿಯ ಮರದ ಅಡಿಯಲ್ಲಿ ದೇವರಕೋಣ ಮಲಗಿಕೊಂಡಿದೆ. ಮೂಗಿಲೇ ಉಸಿರು ಬಿಟ್ಟುಕೂಡಲೇ ಕೋಣ ಮನುಷ್ಯರ ಉಸಿರೆಂದು ಹಿಡಿದಿತು. ಎಲ್ಲ ಮಕ್ಕಳು ಒಲ್ಲೇನು ಅಂದರೆ ನಾ ಒಲ್ಲೇ ಎನಲಿಲ್ಲ ಎಂದುಹೇಳಿ ಬೀರಣ್ಣನು ಕಣ್ಣಿರುತಂದನು. ಎಡದಲ್ಲಾಸನ ಬಲದಲ್ಲಿ ತಿರುವಿ ಕುಡಿಯಳ್ಳಿ ಮೇಲೆ ಹಿರಿದ ಶಾಸಕ್ಕೆ ಕೋಣ ನೆಲಕ್ಕೆ ಬಿದ್ದಿತು. ಕೋಣ ಬಿದ್ದ ಸದ್ದಿಗೆ ಗುಡ್ಡಗಳೆಲ್ಲಾ ಗುಡಿಗಿ ಗುಡ್ಡದ ಗುಂಡೆಲ್ಲಾ ಹೊಡೆದು ತುಂಡಾಗಿದ್ದನ್ನು ಕಂಡು ತಪಸ್ಸಿಯರು ತಮಗೆ ತಾವೇ ಮಾತಾಡಿ ಯಾವ ರಾಜನ ದಂಡಲ್ಲಾ ಎಂದು ಹೇಳಿ ಬೀರಣ್ಣ ಬ್ಯಾಟಿಗೆ ಹೊರಟಿದ್ದಾನೆ ಎಂದು ತಪ್ಪಸ್ಸಿಯರು ಮಾತನಾಡಿಕೊಂಡರು.

### ೧೦. ಹಡಗಲಿ ಹಾಲಸ್ವಾಮಿ

ಪ್ರಸ್ತುತ ಹಾಡಿನಲ್ಲಿ ಹಡಗಲಿ ಹಾಲಸ್ವಾಮಿಯ ಮಹಿಮೆಯನ್ನು ವರ್ಣಿಸಲಾಗಿದೆ. ಒಬ್ಬನು ಕಂಬಳಿ ಕಂಬಳಿ, ಸಣ್ಣನೂಲಿನ ಕಂಬಳಿ ಎಂದು ಕೂಗತ್ತಾ ಬರುವನು. ಆಗ ಜನರು ಇದು ಯಾರಿಗೊಪ್ಪುವ ಕಂಬಳಿ ಎಂದರೆ ನಮ್ಮ ಸ್ವಾಮಿಗೊಪ್ಪುವು ಕಂಬಳಿ ಎಂದು ಜನರು ಹೇಳುವರು. ಈ ಕಂಬಳಿಯನ್ನು ಮುರಿದು ಕೊಪ್ಪಿ ಮಾಡಿಕೊಂಡು ಮುಂದಕ್ಕೆ ಸಾಗಿಬಂದು ಗೌಳೇರಣ್ಣನನ್ನು ಕಂಡನು. ಆಗ ಗೌಳೇರಣ್ಣನನ್ನು ಕುರಿತು ಕಂಬಳಿಯವನು ''ಗೌಳೇರಣ್ಣ ಗೌಳೇರತಮ್ಮ ಹಾಲಿನ ದಾನ ಮಾಡು ಅಂದನು'' ಆಗ ಗೌಳೇರಣ್ಣ ಕಟ್ಟಿದ ಕರುಗಳ ಕಣ್ಣಿಯನ್ನು ಬಿಚ್ಚಿ ತಂಬಿಗೆ ನೊರೆಹಾಲು ಕರೆದು ಸ್ವಾಮಿಗೆ ಕೊಡಲು ಕೊಟ್ಟನು. ಕರುಕುಡಿದ ಹಾಲು ಎಂಜಲವೆಂದು ಹೇಳಿ ಮುಂದಕೆ ಸಾಗಿ ಕುರುಬರಣ್ಣನನ್ನು ಕಂಡನು. ''ಕುರುಬರಣ್ಣ ಕುರುಬರತಮ್ಮ ಹಾಲಿನದಾನ ಮಾಡು ಎಂದನು'' ಆಗ ಕುರುಬರಣ್ಣ ಮುಚ್ಚಿದ ಮರಿಗಳು ಮುಚ್ಚಿದಂಗೆ ಇದ್ದು, ಬಿಂದಿಗೆ ನೊರೆಹಾಲು ಕರೆದು ಸ್ವಾಮಿಗೆ ಕೊಡಲು ಕೊಟ್ಟನು. ಇವು ನನ್ನ ಮೀಸಲುಹಾಲು ಎಂದು ಮೂರು ಬೋಗಸೆ ನೆಲಕ್ಕೆ ಹಾಕಿ ಮುಂದಕ್ಕೆ ಸಾಗಿಹೋದನು. ತೆಗ್ಗುಬಿಟ್ಟು ತೆವರಿಗಿಳಿದನು. ಯಾರಾದರು ಗುರುಹಿರಿಯರಾದ ನೀವುಗಳು ನಮ್ಮ ಗುರುವನ್ನು ಕಂಡಿರಾ ಮತ್ತು ನಮ್ಮ ಗುರುವಿನ ಗುರುತನ್ನು ಹೇಳಿರಿ ಎಂದನು. ಹಂಡಗೊಂಗಡಿ, ಸರಗಿನಬೆತ್ತ, ಸದರಕಂಬಿನ ಹಚ್ಚಡ, ಬಟ್ಟನಮಾರಿ (ದುಂಡನೆ ಮುಖ), ಬಗರಿಯಗಡ್ಡ, ನೆಟ್ಟನ ಮೂಗಿನ ಚೆಲುವ ನಮ್ಮ ಹಡಗಲಿ ಹಾಲಸ್ವಾಮಿಯನ್ನು ಕಂಡಿರೆ ಎಂದು ಹಂಬಲಿಸುತ್ತಾನೆ.

### ೧೧. ಈರಪ್ಪ

ಈರಪ್ಪ ಎಂಬ ಪ್ರಸ್ತುತ ಹಾಡಿನ ಕಥಾರೂಪ ಈ ರೀತಿ ಇದೆ. ಡೊಳ್ಳುಬಡಿಯುವವರ ಮಧ್ಯೆನಿಂತು ತಾಳಹಾಕುವವನಿಗೆ ಈರಪ್ಪ ಎಂದು ಕರೆಯುತ್ತಾರೆ. ಈರಪ್ಪನು ಹೇಗೆ ಇರಬೇಕೆಂದರೆ, ಗತ್ತು - ಗಮ್ಮತ್ತು,

ಧೀರತನಗಳು ಇರಬೇಕು. ಈರಪ್ಪನಿಗೆ ಈ ದೀರತನಗಳು ಇಲ್ಲದಿದ್ದರೆ ಹಿರಿತನಗಳು ಬರುವುದಿಲ್ಲ. ಈರಪ್ಪನ ಹೆಸರಿಗೆ ತಕ್ಕಂತಹ ಒನಪು - ಒಯ್ಯಾರ ಜಂಪುಗಳಿರಬೇಕು. ಈ ಒನಪು - ಜಂಪುಗಳಿಗೆ ತಕ್ಕಂತೆ ಕಿರುಗೆಜ್ಜೆ ಕುಣಿಸುತ್ತಾ ಬರುವಂತನಿರಬೇಕು. ಡೊಳ್ಳಿನ ಮೇಲಿನ ಮುಂಗೈಹಸ್ತ ಗಿಳಿಪಾತ್ರನಂತಿರಬೇಕು. ತಾಳ - ಮೇಳ - ಪಿಲ್ಲಾಳ - ಕೊಳಲು 'ಸೈ' ಎನ್ನುವ ಸಂಗತಿಕೂಡಿ ಬಂದರೆ ಈರಪ್ಪನನ್ನು 'ಸೈ' ಎಂದು ಸ್ವಾಮಿ ಎನ್ನುವರು. ಮತ್ತು ಹತ್ತುಮಂದಿ ಗುರುಹಿರಿಯರ ಬಾಯಿಂದ 'ಹೌದು ಈರುಗಾರ' ಎಂದು ಒಪ್ಪಿಕೊಳ್ಳುವರು. ಒಪ್ಪಿಕೊಂಡು ಕರ್ಪೂರದ ವಿಳ್ಳಾವು ಕೈಪಂಜು ಕೈಯೊಳಗೆ ಹಿಡಿದುಕೊಂಡು ಈರರ ಮಕ್ಕಳು ಆಡುವರು ಎಂದು ಈರಪ್ಪನ ನಾಯಕತ್ವದ ಗುಣದರ್ವಣನೆ ಈ ಪ್ರಸ್ತುತ ಹಾಡಿನಲ್ಲಿ ಕಂಡುಬರುತ್ತದೆ.

### ೧೨. ರೇವಣಸಿದ್ಧ

ಈ ಪ್ರಸ್ತುತ ಹಾಡು ರೇವಣಸಿದ್ಧನ ಮೇಲಿನ ಭಕ್ತಿಯನ್ನು ವರ್ಣಿಸುತ್ತದೆ. ಎಷ್ಟೊಂದು ಪರಿಪರಿಯಿಂದ ಕೇಳಿದರು ಸಾವಿರ ಮುಖದವನಾದ ಸದಾಶಿವನು ನೀನು ನಮಗೆ ಇದ್ದು ಇಲ್ಲದವನಾಗಿರುವೆ. ನಿಮ್ಮೊಳಗೆ ಆಡಿದಾ ಮಾತುಗಳನ್ನು ಮರೆತು ನಮ್ಮ ಹಿರಿಯರು ಜಾಗೀರರಾಗಿ ನಿಮ್ಮನ್ನು ಮರೆತಿದ್ದಾರೆ. ನಿಮಗೆ ಹೀಗೆ ಮಾಡಿದ ಹಿರಿಯರನ್ನು ಕೋರು (ಕುರು) ಹುಡುಗರಾದ ನಾವುಗಳು ಹಿಂದಕ್ಕೆ ಎಳೆದು ನಿಮ್ಮನ್ನು ಕಾಣಲಿಕ್ಕೆ ಬಂದಿದ್ದೇವೆ. ನೀನು ನಮ್ಮ ಹಿರಿಯರು ಮಾಡಿದ ತಪ್ಪಿಗೆ ಕೋಪಗೊಂಡು ನಮ್ಮನ್ನು ಕಡೆಗಣ್ಣಿನಿಂದ ನೋಡಬೇಡ. ವಿಷವನ್ನು ಕಂಠದಲಿ ತಡೆದಂತೆ, ಕಿಡಿಗಣ್ಣಿ (ಹಣೆಗಣ್ಣು) ನಿಂದ ನೋಡದೆ ಸವೆಗಣ್ಣಿನಿಂದ ನೋಡಿ ನಮ್ಮನ್ನು ಸಲುವಲು ಬಾ ರೇವಣಸಿದ್ಧನೆಂದು ಬೇಡಿಕೊಳ್ಳುವರು.

### ೧೩. ರೋಣದ ಹಾಡು

ರೋಣದಹಾಡು ಎಂಬ ಪ್ರಸ್ತುತ ಹಾಡಿನಲ್ಲಿ ಎತ್ತುಗಳನ್ನು ಜಾತ್ರೆಯಲ್ಲಿ ಹೇಗೆ ಕೊಂಡುತರುವರು ಎಂಬುದರ ಬಗ್ಗೆ ವರ್ಣಿಸುತ್ತದೆ. ಶಿರಹಟ್ಟಿ ಜಾತ್ರೆಗೆ ಒಮ್ಮೆ ಹೋರಿಯನ್ನು ತರಲಿಕ್ಕೆಂದು ಒಬ್ಬನು ಹೋಗಿದ್ದನು. ಹೋರಿಯನ್ನು ನೋಡಿ ಖರೀದಿಸುವ ಮನಸ್ಸು ಮಾಡಿದನು. ಆ ಹೋರಿಯ ಮಾಲಿಕನು ಬಹಳ ಬೆಲೆಯನ್ನು ಹೇಳಿದನು. ಆಗ ಕೊಳ್ಳುವವನು 'ಬೆಲೆ ಬಹಳ ಆಯಿತು' ಎಂದು ಹೊರಡುವ ಸ್ಥಿತಿಯಲ್ಲಿದ್ದಾಗ ಹೋರಿಯವನು ಯೋಚನೆಮಾಡಿ ಕೊಳ್ಳುವವನ್ನು ಪುನಃ ಪುನಃ ಕರೆದು 'ಸಾವಿರ' ರೂಪಾಯಿಗಳನ್ನು ಹೇಳಿದನು. ಆಗ ಕೊಳ್ಳುವವ ಸಾವಿರ ಬೆಲೆ ಕೊಡುತ್ತೇನೆಂದು ಒಮ್ಮೆ ಹೋರಿಯನ್ನು ಮೈಮುಟ್ಟಿ, ಕೈಮುಟ್ಟಿ ಎಬ್ಬಿಸಿದನು. ಆಗ ಅದೇ ಸಮಯಕ್ಕೆ 'ಸೂಳಿಗೇರು' ಎಂಬ ಗ್ರಾಮದವರು ಬಂದು ಹೋರಿಯ ಸುಳಿಯನ್ನು ನೋಡಿದರು: 'ಕೋಡೆಳ್ಳಿ' ಗ್ರಾಮದವರು ಬಂದು 'ಕೋಡು'ಗಳನ್ನು ನೋಡಿದರು: 'ಮುದ್ನಾಪುರ' ಗ್ರಾಮದವರು ಬಂದು 'ಮೂಗು'ನೋಡಿದರು: 'ಕವಿತಾಳ' ಗ್ರಾಮದವರು ಬಂದು 'ಕಿವಿ' ನೋಡಿದರು: 'ಅಣ್ಣಿಗೇರಿ' ಗ್ರಾಮದವರು ಬಂದು 'ಕಣ್ಣು' ನೋಡಿದರು: 'ಅಬ್ಬಿಗೇರಿ' ಗ್ರಾಮದವರು ಬಂದು ಹೋರಿಯ 'ಡುಬ್ಬ' ನೋಡಿದರು: 'ಹ್ಯಾಡ್ಲ' ಗ್ರಾಮದವರು ಬಂದು ಹೋರಿಯ 'ಹೆಗಲ' ನೋಡಿದರು:

'ಕಾವಲೂರು' ಗ್ರಾಮದವರು ಬಂದು 'ಕಾಲು'ಗಳನ್ನು ನೋಡಿದರು: 'ಗಜಾಪುರ' ಗ್ರಾಮದವರು ಬಂದು ಹೋರಿಯ 'ಭುಜ' ನೋಡಿದರು: 'ಬಾಗಳಿ' ಗ್ರಾಮದವರು ಬಂದು ಹೋರಿಯ 'ಬಾಲ' ನೋಡಿದರು: 'ಬಾಗಲಕೋಟೆ' ಗ್ರಾಮದವರು ಬಂದು ಹೋರಿಯ 'ಬಾಯಿ' ನೋಡಿದರು: 'ಬಲ್ಲಾಹುಣಿಸೆ' ಮತ್ತು 'ಕಲ್ಲಹಳ್ಳಿ' ಗ್ರಾಮದವರು ಬಂದು ಹೋರಿಯನ್ನು 'ಖರೀದಿ' ಮಾಡೋದ್ರೊಳಗೆ, 'ಗುಡ್ಲಾನೂರು' ಗ್ರಾಮದವರು ಬಂದು ಹೋರಿಯನ್ನು 'ಹೂಡಾನ' ಅಂದರು: 'ಹನುಕುಂಟಿ' ಗ್ರಾಮದವರು ಬಂದು 'ಕುಂಟೆ'ಯನ್ನು ತಂದರು: 'ಬಳ್ಳಾರಿ'ಯವರು ಬಂದು 'ಬಳಿ' ತಂದರು: 'ಕೂಡ್ಲಿಗಿ'ಯವರು ಬಂದು 'ಕುಡ' ತಂದರು: 'ಉಡುಪಿ'ಯವರು ಬಂದು ಹೋರಿಯನ್ನು 'ಹೂಡಿ'ದರು: 'ಚಲ್ಲುವಾಡಿ ಗ್ರಾಮದವರು 'ಚ್ಯಾ' ಅಂದರು: 'ಹ್ಯಾಡ್ಲ' ಗ್ರಾಮದವರು ಬಂದು ಹೋರಿಯ 'ಎಳೆತ' ನೋಡಿದರು: 'ನೀರ್ಲಿಗಿ' ಗ್ರಾಮದವರು 'ಇರ್ಲಿಬಿಡು' ಅಂದರು: 'ದುಗ್ಗಾವತಿ'ಯವರು 'ದುಡ್ಡು' ಕೊಟ್ಟರು: 'ಹನಸಿ'ಯವರು ಬಂದು ದುಡ್ಡನ್ನು ಎಣಿಸಿಕೊಟ್ಟರು: 'ಇಡಚಿ'ಯವರು ಬಂದು 'ಹಿಡಿಹಗ್ಗ' ಅಂದು ಕೂಡಲೇ ಕೊಳ್ಳುವವನು ಒಂದೇ ಮಾತಿಗೆ ಒಪ್ಪಿ ಚಂದಾಗಿ ಹೋರಿಯನ್ನು ಹಿಡಿದುಕೊಂಡು ಊರಿಗೆ ಬಂದನು.

### ೧೪. ಜೊಳ್ಳಾಸುರನ ಪದ

ಪ್ರಸ್ತುತ ಜೊಳ್ಳಾಸುರನ ಹಾಡಿನಲ್ಲಿ ಡೊಳ್ಳಿನ ಉಗಮ ಹಾಗೂ ಅದರ ಹಿನ್ನೆಲೆ ಹೇಳಿರುವುದರ ಜೊತೆಗೆ ಡೊಳ್ಳನ್ನು ಒಳ್ಳೆಯ ಕಾರ್ಯಕ್ಕೆ ಮಾತ್ರ ಉಪಯೋಗಿಸಬೇಕೆಂಬ ಸಂಗತಿಯನ್ನು ಸವಿಸ್ತಾರವಾಗಿ ವಿವರಿಸಿದ್ದಾರೆ. ಹಿಂದೆ ಜೊಳ್ಳಾಸುರನೆಂಬ ದೈತ್ಯನು ಪರಶಿವನನ್ನು ಕುರಿತು ಘೋರತಪಸ್ಸನ್ನು ಗೈಯುತ್ತಾನೆ. ಆತನ ತಪಸ್ಸಿಗೆ ಮೆಚ್ಚಿದ ಶಿವ ಯಾವ ವರಬೇಕೆಂದು ದೈತ್ಯನನ್ನು ಕೇಳಿದಾಗ, ಆತನನ್ನೇ ನುಂಗುವ ವರ ದಯಪಾಲಿಸಬೇಕೆಂದು ಶಿವನಲ್ಲಿ ದೈತ್ಯನು ಬೇಡಿಕೊಳ್ಳುತ್ತಾನೆ. ನಿರುಪಾಯನಾದ ಶಿವನು 'ತಥಾಸ್ತು' ಎನ್ನುತ್ತಾನೆ. ಆದರೆ ಮತ್ತೆ 'ತನ್ನನ್ನು ಎಂದು ವಿಮುಕ್ತನನ್ನಾಗಿ ಮಾಡುವಿ' ಎಂದು ದೈತ್ಯನನ್ನು ಶಿವ ಮರುಪ್ರಶ್ನಿಸುತ್ತಾನೆ. ಪಂಚರಾತ್ರಿಗಳು ಕೂಡಿದಾಗ ನಿನಗೆ ವಿಮುಕ್ತಿಯಾಗುವದೆಂದು ಹೇಳಿ ಪರಶಿವನನ್ನು ದೈತ್ಯ ನುಂಗುತ್ತಾನೆ. ಸರಿ, ರಾಕ್ಷಸನ ದುರ್ದೈವವೋ ಅಥವಾ ದೇವತೆಗಳ ಸುದೈವವೋ ಎನ್ನುವಂತೆ ಕೆಲದಿನಗಳಲ್ಲಿಯೇ ಪಂಚರಾತ್ರಿಗಳು ಕೂಡುವ ಸುಯೋಗ ಬರುತ್ತದೆ. ಆದಾಗ್ಯೂ ರಕ್ಕಸ ಶಿವನನ್ನು ಹೊರಗೆ ಬಿಡದಾದಾಗ ಸ್ವತಃ ವಿಷ್ಣುಪರಮಾತ್ಮನೇ ದೈತ್ಯನ ಬಳಿಬಂದು ಪರಶಿವನನ್ನು ಸ್ತುತಿಸಲು ದೈತ್ಯನ ಹೊಟ್ಟೆಯೊಳಗಿದ್ದ ಪರಶಿವ ಆನಂದದಿಂದ ಉಬ್ಬುತ್ತ ಹೋದಾಗ ದೈತ್ಯನ ಹೊಟ್ಟೆಯೊಡೆದು ಹೊರಬಂದರೂ ಪರಶಿವನು ಯೋಗಾನಂದದಲ್ಲಿ ಲೀನನಾಗಿರುತ್ತಾನೆ. ಪರಶಿವನು ಯೋಗದಿಂದ ವಿಮುಖನಾಗುವದು ಹೇಗೆಂದು ವಿಷ್ಣುಪರಮಾತ್ಮನು ವಿಚಾರಿಸುವಾಗ ಸತ್ತ ದೈತ್ಯನ ಡೊಕ್ಕಿ ಎಲುಬು ತೆಗೆದುಕೊಂಡು ಪಡಗವನ್ನು ಮಾಡಿ ಅದಕ್ಕೆ ಚರ್ಮ ಬಿಗಿದು ರಾಕ್ಷಸನ ಕೋರೆಹಲ್ಲುಗಳಿಂದ ಡೊಳ್ಳನ್ನು ಬಡಿಯಲು ಪ್ರಾರಂಭಿಸಿದಾಗ ಶಿವ ಭರತನಾಟ್ಯ ಮಾಡುತ್ತ ಕಣ್ಣು ತೆರೆಯುತ್ತಾನೆ. ಹೀಗೆ ದೇವರನ್ನು ಕರೆಯುವದಕ್ಕೆ ಅಥವಾ ದೇವರ ಲಕ್ಷ್ಯವನ್ನು ತಮ್ಮೆಡೆಗೆ ಸೆಳೆಯುವದಕ್ಕಾಗಿ ಅಂದಿನಿಂದ ಡೊಳ್ಳುಬಡಿಯುವ ಪರಿಪಾಠ ಪ್ರಾರಂಭವಾಯಿತೆಂದು ಕುರುಬರ ನಂಬುಗೆಯಾಗಿದೆ.

## ೫.೨ ಡೊಳ್ಳಿನ ಮಜಲುಗಳು

ಕರ್ನಾಟಕ ಜನಪದ ಕಲೆಗಳಲ್ಲಿ ಒಂದೊಂದು ಕಲೆಗೆ ಒಂದೊಂದು ರೀತಿಯ ವೇಷ - ಭೂಷಣಗಳು, ವಾದ್ಯ ಪರಿಕರಳಿರುತ್ತವೆ. ಒಂದು ಕಲೆ ಒಂದೇ ಪ್ರದೇಶದ ಬೇರೆ ಬೇರೆ ಭಾಗಗಳಲ್ಲಿ ವ್ಯತ್ಯಾಸವನ್ನು ಮೈಗೂಡಿಸಿಕೊಂಡಿರುತ್ತದೆ. ಜೊತೆಗೆ ಒಂದೇ ಕಲೆ ಅಲ್ಪ - ಸ್ವಲ್ಪ ವ್ಯತ್ಯಾಸಗಳೊಂದಿಗೆ ಹಲವಾರು ಪ್ರದೇಶಗಳಲ್ಲಿ ರೂಢಿಯಲ್ಲಿರುವುದುಂಟು. ಆದರೆ ಡೊಳ್ಳಿನ ಕಲೆಯಲ್ಲಿ "ದಿಳ್ಳಿಗೆ ಹೋದರೂ ಡೊಳ್ಳಿಗೆ ಒಂದೇ ಪಟ್ಟು" ಎಂಬ ಗಾದೆಯಂತೆ ಡೊಳ್ಳುಬಾರಿಸುವ ವಿಧಾನಗಳಲ್ಲಿ ಎಲ್ಲಾ ಗತ್ತುಗಳಲ್ಲಿಯೂ ಒಂದೇ ರೀತಿಯಲ್ಲಿರುತ್ತವೆ. ಡೊಳ್ಳಿನ ಪಟ್ಟುಗಳು ಅನೇಕ ಇವೆ ಹಾಗೂ ಡೊಳ್ಳಿನ ಪಟ್ಟಿಗೆ ತಕ್ಕಂತೆ ಹಲವಾರು ಕುಣಿತಗಳೂ ಇವೆ. ಆದರೆ ಕಲಾವಿದನ ಪ್ರತಿಭೆಗೆ ತಕ್ಕಂತೆ ಪಟ್ಟು ಹಾಗೂ ಕುಣಿತಗಳು ವಿಶಿಷ್ಟತೆಯನ್ನು ಪಡೆದುಕೊಳ್ಳುತ್ತವೆ. ದೊಡ್ಡಗಾತ್ರದ ಡೊಳ್ಳನ್ನು ಸೊಂಟಕ್ಕೆ ಬಿಗಿದುಕೊಂಡು ನಿಂತು ಗುಂಪಿನ ಪ್ರಥಮ ದರ್ಶನದಲ್ಲೇ ಪ್ರೇಕ್ಷಕರಿಗೆ ಕಲೆಯ ಭವ್ಯತೆಯ ಕಲ್ಪನೆಯನ್ನುಂಟುಮಾಡುತ್ತದೆ. ಕ್ರಮಬದ್ಧವಾದ ಪಟ್ಟುಗಳೊಂದಿಗೆ ಅಚ್ಚರಿಯನ್ನುಂಟುಮಾಡುತ್ತದೆ. ಆರಂಭದ ಡೊಳ್ಳಿನ ಗತ್ತು 'ಬ್ರಹ್ಮದೊಡ್ಡಾಂವ್' ಎಂಬ ಘೋಷಣೆಯನ್ನು ಹುಟ್ಟಿಸಿದರೆ, ಮುಕ್ತಾಯಕ್ಕೆ ಬರುವ ಹೊತ್ತಿಗೆ ಹಿಡಿದ್ಹಾಂಗ್, ಬಿಟ್ಹಾಂಗ್ ಎಂಬಂತೆ ಕೇಳುವ ಪಟ್ಟು ಹಾಕುತ್ತಾ 'ಡುಬ್ಬದ್ದುರಿ, ಡುಬ್ಬದ್ದುರಿ, ಡುಬ್ಬದ್ದುರಿ ಎಂದು ತೀರ್ಮಾನ ಹೇಳುವಂತೆ ಗತ್ತನ್ನು ಮುಗಿಸುತ್ತದೆ.

## ಡೊಳ್ಳಿನ ಪಟ್ಟುಗಳು ಹಾಗೂ ಡೊಳ್ಳಿನ ಬಡಿತಗಳು

ಮರಗಾಲು ಬಡಿತ, ಕಾಲುಮಂಡಿ ಬಡಿತ, ಕುಳಿತು ಬಾರಿಸುವುದು, ಲಾಗಹಾಕುವುದು, ಹಾರಿಬಾರಿಸು ವುದು, ಇತ್ಯಾದಿ ಬಡಿತಗಳೊಂದಿಗೆ ಕುಣಿಯುತ್ತಾರೆ. ಡೊಳ್ಳಿನ ಪಟ್ಟುಗಳಲ್ಲಿ ಮೊದಲು ಗುಣಿಗಳನ್ನು ಬಳಸುತ್ತಾರೆ. ಈ ಗುಣಿಗಳಲ್ಲಿ ಒಂದರಿಂದ ಹತ್ತರವರೆಗೆ ಗುಣಿಗಳನ್ನು ಬಳಸುತ್ತಾರೆ. ಗುಣಿ ಲೆಕ್ಕದಲ್ಲಿ ಬಾರಿಸುವಿಕೆ ಹೊಡೆತಗಳ ಸಂಖ್ಯೆಯನ್ನು ಸೂಚಿಸುತ್ತದೆ. ಉದಾ: ಒಂಟಿಗುಣಿ, ಎರಡುಗುಣಿ, ಮೂರುಗುಣಿ ಹೀಗೆ ಹತ್ತುಗುಣಿಯವರೆಗೆ ಡೊಳ್ಳಿನ ಪಟ್ಟುಗಳಲ್ಲಿ ಬಳಸುತ್ತಾರೆ. ಜೊತೆಗೆ ಸಣ್ಣದಿಮ್ಮು, ಮುಚ್ಚುದಿಮ್ಮು, ದೊಡ್ಡದಿಮ್ಮುಗಳ ಬಳಕೆ ಇದೆ. ಈ ಡೊಳ್ಳಿನ ಪಟ್ಟಿನಲ್ಲಿ ವಿಶೇಷವಾಗಿ 'ಹರಿವಾಲಗ' ಎಂಬ ಪಟ್ಟನ್ನು ಉಪಯೋಗಿಸುತ್ತಾರೆ.

## ಡೊಳ್ಳಿನ ಪಟ್ಟುಗಳ ವಿವರ

### ಒಂಟಿಗುಣಿ

ಒಂಟಿಗುಣಿಗೆ 'ಮೊದಲಹೆಜ್ಜೆ' ಎಂದು ಕರೆಯುತ್ತಾರೆ. ಅಂದರೆ ಒಂದು ಕೋಲು (ಬಲ) ಪಟ್ಟಿ, ಬಳಿಕ ಒಂದು ಕೈ (ಎಡ) ಪಟ್ಟು, ಇದೇ ಕ್ರಮೇಣ ಹೆಚ್ಚುತ್ತಾ ಹೋಗುತ್ತದೆ. ಇದನ್ನು ಡೊಳ್ಳನ್ನು ಆರಂಭಿಸುವ ಸಮಯದಲ್ಲಿ ಬಳಸುತ್ತಾರೆ.

**ಎರಡುಗುಣಿ**

'ಎರಡುಗುಣಿ' ಎಂದರೆ ಎರಡುಕೋಲಿನ ಪಟ್ಟಿನ ಬಳಿಕ ಒಂದು ಕೈಪಟ್ಟು ಬಾರಿಸುವುದು. ಕಲಾವಿದರು ಹೆಚ್ಚಾಗಿ ಗುಣಿಯನ್ನು ಬಳಸುವ ಸಂಖ್ಯೆಗಳು ಬೆಸಸಂಖ್ಯೆಯಲ್ಲಿರುವುದು ಕಂಡುಬರುತ್ತವೆ. ಅದಕ್ಕಾಗಿ ಸರಿಸಂಖ್ಯೆಯಾದ ಈ ಎರಡು ಗುಣಿಯನ್ನು ಬಳಸುವುದು ಅಪರೂಪವಾಗಿರುತ್ತದೆ.

**ಮೂರುಗುಣಿ**

ಮೂರುಗುಣಿ ಎಂದರೆ ಮೂರುಕೋಲು ಪಟ್ಟಿನ ಬಳಿಕ ಒಂದು ಕೈಪಟ್ಟು ಬಾರಿಸುವುದು. ಬಹುತೇಕವಾಗಿ ಬೆಸಸಂಖ್ಯೆಯಲ್ಲಿ ಗುಣಿಯನ್ನು ಬಳಸುವುದರಿಂದ ಬಾರಿಸುವ ಗತ್ತಿಗೆ ಚೆನ್ನಾಗಿ ಹೊಂದಿಕೊಂಡು ತಾಳದ ಗಣನೆ ಮೆರುಗು ನೀಡುತ್ತದೆ.

ಇನ್ನುಳಿದ ನಾಲ್ಕುಗುಣಿ, ಐದುಗುಣಿ, ಆರುಗುಣಿ, ಏಳುಗುಣಿ, ಎಂಟುಗುಣಿ, ಒಂಭತ್ತುಗುಣಿ, ಹತ್ತುಗುಣಿ ಇವುಗಳನ್ನು ಸಹ ಒಂದುಗುಣಿಗೆ ಒಂದು ಕೋಲಿನ ಹೊಡೆತ (ಗುಣಿ) ಜೊತೆಗೆ ಒಂದು ಕೈಪಟ್ಟು ಬಳಸುತ್ತಾರೆ. ಕ್ರಮವಾಗಿ ಎರಡುಗುಣಿಗೆ ಎರಡು ಹೊಡೆತದ ಒಂದು ಕೈಪಟ್ಟು ಬಳಸುತ್ತಾರೆ. ಮೂರುಗುಣಿಗೆ ಮೂರು ಕೋಲಿನ ಪೆಟ್ಟು ನಂತರ ಒಂದು ಕೈಪಟ್ಟನ್ನು ಬಾರಿಸುತ್ತಾರೆ. ಹೀಗೆ ಸಂಖ್ಯೆಗಳಿನುಗುಣವಾಗಿ ಕೋಲಿನ ಪೆಟ್ಟುಗಳನ್ನು ಬಳಸಿ ನಂತರ ಒಂದು ಕೈಪಟ್ಟನ್ನು ಬಳಸುತ್ತಾರೆ. ಈ ಗುಣಿಗಳ ಹತ್ತು ಸಂಖ್ಯೆಯಲ್ಲಿ ಏಳು ಸಂಖ್ಯೆಯ ಗುಣಿಯ ಪಟ್ಟನ್ನು ಮಾತ್ರ ಬಾರಿಸುವುದಿಲ್ಲ. ಕಾರಣ (ಅವರ) ಜನಪದರ ದೃಷ್ಠಿಯಲ್ಲಿ ಏಳು ಅಶುಭ ಸಂಖ್ಯೆ ಎಂದು ಈ ಪಟ್ಟನ್ನು ಬಳಸುವುದಿಲ್ಲ. ಹೆಚ್ಚಾಗಿ ಬೆಸಸಂಖ್ಯೆಯ ಗುಣಗಳನ್ನು ಬಳಸುವುದಕ್ಕೆ ಕಾರಣ ಅವು ಗತ್ತುಗೆ ಚೆನ್ನಾಗಿ ಹೊಂದಿಕೊಂಡು ಹೆಜ್ಜೆ ಹಾಕಲಿಕ್ಕೆ ಅನುಕೂಲವಾಗುವದರಿಂದ ಬಹುತೇಕವಾಗಿ ಬೆಸ ಸಂಖ್ಯೆಗಳನ್ನು ಬಳಸುತ್ತಾರೆ. ಹಾಗೂ ಹೆಚ್ಚು ಗುಣಿಯನ್ನು ಬಾರಿಸುವಾಗ ಜೋಡಿ ಕಲಾವಿದರು ಎದರು ಬದರು ನಿಂತು ಬಲಗಾಲು ಮುಂದಿಟ್ಟು ಬಾಗಿ ಪೈಪೋಟಿಯಿಂದ ಹೆಜ್ಜೆಯನ್ನು ಹಾಕುತ್ತಾರೆ. ಕುಣಿಯುವ ಕಲಾವಿದರ ಭಂಗಿ ಬಾರಿಸುವ ಗತ್ತುಗಾರಿಕೆ ನೋಡಲು ರಂಜನೀಯವಾಗಿರುತ್ತದೆ.

ಸಣ್ಣದಿಮ್ಮ, ದೊಡ್ಡದಿಮ್ಮ, ಮುಚ್ಚದಿಮ್ಮ ಎಂಬ ಈ ಮೂರು ದಿಮ್ಮಗಳನ್ನು ಕೈಯಿಂದ ಬಾರಿಸಲ್ಪಡುತ್ತವೆ. ಎಡಗೈ ಮತ್ತು ಬಲಗೈಯಿಂದ ನಾನಾ ವಿವಿಧ ನಾದಗಳಲ್ಲಿ ಬಾರಿಸುತ್ತಾರೆ. ಈ ದಿಮ್ಮುಗಳಲ್ಲಿ ಗುಣಿಪೆಟ್ಟುಗಳಿಗೆ ಅವಕಾಶ ಇರುವುದಿಲ್ಲ. ಒಂದುಸುತ್ತು ಡೊಳ್ಳನ್ನು ಬಡಿದು ನಂತರ ಇನ್ನೊಬ್ಬರು ಡೊಳ್ಳನ್ನು ಬಡಿಯುವ ಸಂದರ್ಭದಲ್ಲಿ ದಿಮ್ಮುಗಳನ್ನು ಉಪಯೋಗಿಸುತ್ತಾರೆ. ಮತ್ತು ಡೊಳ್ಳಿನ ಕಾರ್ಯಕ್ರಮವನ್ನು ಮುಕ್ತಾಯಗೊಳಿಸುವ ಸಮಯದಲ್ಲಿ ಸಹ ಈ ಮೂರು ದಿಮ್ಮುಗಳನ್ನು ಬಳಸುತ್ತಾರೆ.

**ಹರಿವಾಲಗ**

ಡೊಳ್ಳಿನ ಪಟ್ಟುಗಳಲ್ಲೇ ವಿಶೇಷವಾದ ಪಟ್ಟು ಎಂದರೆ 'ಹರಿವಾಲಗ' ಈ ವಾಲಗವನ್ನು ಹಲವಾರು ತಂಡಗಳು ಕೂಡಿರುವ ಸಮಯದಲ್ಲಿ ಒಬ್ಬರಿಗೊಬ್ಬರು ಸ್ಪರ್ಧಾತ್ಮಕವಾಗಿ ಬಾರಿಸುವಾಗ 'ಹರಿವಾಲಗ'ವನ್ನು

ಬಳಸುತ್ತಾರೆ. ಇದನ್ನು ಹೆಚ್ಚಾಗಿ ಎದುರಾಳಿ ತಂಡವನ್ನು ಸೋಲಿಸುವ ಸಂದರ್ಭದಲ್ಲಿ ಉಪಯೋಗಿಸುತ್ತಾರೆ. ಮತ್ತು ಹತ್ತು - ಹದಿನೈದು, ಒಮ್ಮೊಮ್ಮೆ ಐವತ್ತಕ್ಕೂ ಹೆಚ್ಚು ಡೊಳ್ಳುಗಳು ಕೂಡಿಕೊಂಡು ಒಂದೇ ಸಮನೆ ತಾಸುಗಟ್ಟಲೆ ಬಾರಿಸುತ್ತಾರೆ. ಇದು ಒಮ್ಮೊಮ್ಮೆ ಹಗಲುರಾತ್ರಿ ಕೂಡಿಯೇ ನಡೆಯುವುದುಂಟು. ಈ ವಾಲಗವನ್ನು ಬಡಿಯುತ್ತಿರುವಾಗ ನಾದವು ತುಂಬಾ ಕರ್ಕಶವಾಗಿ ಬರುವುದರಿಂದ ಬಡಿಯುತ್ತಿರುವ ಕಲಾವಿದರಿಗೆ ಮತ್ತಷ್ಟು ಅವರನ್ನು ಹುರಿದುಂಬಿಸಿದಂತಾಗುತ್ತದೆ. ಆದ್ದರಿಂದ ಇದನ್ನು ರಾತ್ರಿಯಿಂದ ಇಡಿದು ಬೆಳಕು ಹರಿಯುತನಕ ಬಾರಿಸುತ್ತಾರೆ. ಈ ಒಂದು ವಾಲಗದಲ್ಲೇ ಕಲಾವಿದರು ಎಷ್ಟರಮಟ್ಟಿಗೆ ಡೊಳ್ಳಿನ ಕಲೆಯನ್ನು ರೂಢಿಸಿಕೊಂಡಿದ್ದಾರೆ ಎಂಬುದನ್ನು ನಿರ್ಧರಿಸುತ್ತದೆ.

## ಡೊಳ್ಳಿನ ಬಡಿತಗಳ ವಿವರ

೧. **ಮಂಡಿಬಡಿತ :** ತ್ವರಿತ ಗತಿಯ ಬಡಿತದ ಸಂದರ್ಭದಲ್ಲಿ ಜೋಡಿ ಕಲಾವಿದರು ಎಡಗಾಲು ಮಂಡಿಯನ್ನು ನೆಲಕ್ಕೆ ಒತ್ತಿ ಬಲಗಾಲನ್ನು ಊರಿಕೊಂಡು ಡೊಳ್ಳುಬಾರಿಸುವುದು ಈ ಕ್ರಮಕ್ಕೆ ಮಂಡಿಬಡಿತ ಎನ್ನುತ್ತಾರೆ.

೨. **ಮರಗಾಲು ಬಡಿತ :** ಈ ಒಂದು ಬಡಿತವನ್ನು ಡೊಳ್ಳಿನ ಕಲಾವಿದರು ಕೆಲವರು ಮಾತ್ರ ಈ ಬಡಿತದ ಅಭ್ಯಾಸವನ್ನು ಮಾಡಿರುತ್ತಾರೆ. ಸುಮಾರು ಒಂದರಿಂದ ಎರಡು ಅಡಿ ಎತ್ತರದ ಮರಗಾಲನ್ನು ಕಾಲಿಗೆ ಕಟ್ಟಿಕೊಂಡು ಡೊಳ್ಳನ್ನು ಬಾರಿಸುತ್ತಾರೆ.

೩. **ಕುಳಿತು ಬಾರಿಸುವುದು :** ಡೊಳ್ಳನ್ನು ಕೊರಳಿಗೆ ಹಾಕಿಕೊಂಡು ಕುಕ್ಕರಗಾಲಿನಲ್ಲಿ ಕುಳಿತುಕೊಂಡು ಡೊಳ್ಳನ್ನು ಬಾರಿಸುತ್ತ ಕುಪ್ಪಳಿಸುವುದು. ಈ ಒಂದು ವಿಧಾನವು ನಿಧಾನವಾಗಿ ನಡೆಯುತ್ತದೆ. ನಾಲ್ಕು - ಐದು ಕೆ.ಜಿ. ತೂಕದ ಭಾರವನ್ನು ಹೊಂದಿದ ಡೊಳ್ಳನ್ನು ಹೆಗಲಿಗೆ ಹಾಕಿಕೊಂಡು ಕುಕ್ಕರಗಾಲಿನಲ್ಲಿ ಕುಳಿತುಕೊಂಡು ಇದನ್ನು ನಿಧಾನವಾಗಿ ಬಾರಿಸುತ್ತಾರೆ.

೪. **ಲಾಗ ಹಾಕುವುದು :** ಇದನ್ನು ತಂಡದ ಒಂದೆರಡು ಮಂದಿ ಮಾತ್ರ ಅಭ್ಯಾಸ ಮಾಡುತ್ತಾರೆ. ಡೊಳ್ಳು ಬಾರಿಸುತ್ತಿರುವಾಗಲೇ ಗತ್ತಿಗೆ ತಕ್ಕಂತೆ ಲಾಗಹಾಕುವುದು. ಮತ್ತೆ ನೇರ ಸ್ಥಿತಿಗೆ ಬಂದು ಗತ್ತು ತಪ್ಪದಂತೆ ಪಟ್ಟುಹಾಕುವುದು. ಈ ವಿಧಾನವನ್ನು ಮುದಿಮಲ್ಲಪ್ಪನವರು ಚೆನ್ನಾಗಿ ರೂಢಿಸಿಕೊಂಡು ಬಂದಿದ್ದರು. ಲಾಗ ಹಾಕುವ

ವಿಧಾನವನ್ನು ನೋಡಲಿಕ್ಕೆಂದು ಜನರು ಕಾತುರದಿಂದ ಕಾದು ಕುಳಿತುಕೊಂಡಿರುತ್ತಾರೆ. ಈ ವಿಧಾನವನ್ನು ನೋಡುವುದು ಕಣ್ಣಿಗೆ ಮನೋಹರವಾಗಿ ಕಾಣಿಸುತ್ತದೆ. ಹಾಗೂ ಈ ವಿಧಾನಕ್ಕೆ ಮನಸ್ಥೈರ್ಯವನ್ನು ಹೊಂದಿದ (ವ್ಯಕ್ತಿ) ಕಲಾವಿದರು ಮಾತ್ರ ಇದನ್ನು ಅಭ್ಯಾಸ ಮಾಡಿರುತ್ತಾರೆ.

೫. **ಹಾರಿ ಬಾರಿಸುವುದು :** ಕಲಾವಿದರು ನಡುವಿಗೆ ಡೊಳ್ಳನ್ನು ಕಟ್ಟಿಕೊಂಡು ಡೊಳ್ಳುಬಾರಿಸುತ್ತಲೇ ಎರಡು ಮೂರು ಅಡಿ ಮೇಲೆ ನೆಗೆಯುವುದು. ಹೀಗೆ ನೆಲದಿಂದ ಎರಡು ಮೂರು ಅಡಿ ಎತ್ತರ ಜಿಗಿಯುತ್ತಾರೆ. ಈ ಒಂದು ವಿಧಾನ ಸಹ ನೋಡುಗರ ಕಣ್ಣಿಗೆ ಮನಮೋಹಕ ದೃಶ್ಯವೆಂದು ಕಂಡುಬರುತ್ತದೆ. ನೋಡುಗರ ಮನಸ್ಸನನ್ನು ಸೂರೆಗೊಳ್ಳುವಂತೆ ಮಾಡುತ್ತದೆ.

## ಗಾಡಿ ಚಕ್ರದ ಬಡಿತ

"ಕಬ್ಬಿಣದ ಅಚ್ಚಿನ ಮೇಲೆ ಎತ್ತಿನ ಗಾಡಿಯ ಚಕ್ರವನ್ನಿಟ್ಟು ಅದರ ಮೇಲೆ ನಿಂತು ಎತ್ತಿನ ಗಾಡಿಯ ಚಕ್ರವನ್ನಿಟ್ಟು ಅದರ ಮೇಲೆ ನಿಂತುಕೊಂಡು ತಲೆಯ ಮೇಲೆ ತುಂಬಿದ ಕೊಡವನ್ನಿಟ್ಟುಕೊಂಡು ಡೊಳ್ಳುಬಾರಿಸುವುದು. ಇದೊಂದು ವಿಶೇಷ ಪ್ರಕಾರವೆನಿಸುತ್ತದೆ. ಈ ರೀತಿ ಬಾರಿಸುವವರು ತುಂಬಾ ವಿರಳ ಮತ್ತು ಬಾಯಲ್ಲಿ ತುಂಬಿದ ಕೊಡ ಕಚ್ಚಿಕೊಂಡು ನೀರು ಚೆಲ್ಲದಂತೆ ಡೊಳ್ಳು ಬಾರಿಸುತ್ತ ಕುಣಿಯುವುದು. ಅಂಗಾತ ಮಲಗಿ ಡೊಳ್ಳನ್ನು ಬಾರಿಸುತ್ತಾ ಹಾಗೆಯೇ ತೆವಳುತ್ತ ಸುತ್ತುವುದು. ಒಂದು ದೊಡ್ಡ ಡೊಳ್ಳಿನ ಮೇಲೆ ಮತ್ತೊಂದು ಚಿಕ್ಕ ಡೊಳ್ಳನ್ನು ಕಟ್ಟಿ ಎರಡೂ ಡೊಳ್ಳನ್ನು ಒಂದಾದ ಮೇಲೊಂದನ್ನು ಬಾರಿಸುವುದು. ಕಲಾವಿದನ ಹಿಂಭಾಗ ಹಾಗೂ ಮುಂಭಾಗಗಳಿಗೆ ಒಂದೊಂದು ಡೊಳ್ಳನ್ನು ಕಟ್ಟಿ, ಆ ಡೊಳ್ಳಿನ ಮೇಲೆ ಚಿಕ್ಕ ಬಾಲಕರನ್ನು ಕೂರಿಸಿಕೊಂಡು ಎರಡು ಡೊಳ್ಳುಗಳನ್ನು ಬಾರಿಸುವುದು. ಹೀಗೆ ಹಲವಾರು ವಿಧಾನಗಳಲ್ಲಿ ಡೊಳ್ಳನ್ನು ಬಾರಿಸುವ ಕಲೆಗಳನ್ನು ಹೊಂದಿದೆ. ಇದರ ಜೊತೆಗೆ ಮಧ್ಯದಲ್ಲಿ 'ವೀರಗಾರ'ನೆಂಬ ಕಾಶಿ ಇರುತ್ತಾನೆ. ಆತ ತಾಳ ಹಾಕುತ್ತ, ಹಾಡುಹೇಳುತ್ತಾನೆ. ಡೊಳ್ಳಿನ ಮೇಳಕ್ಕೆ ಸೂತ್ರಧಾರನಿದ್ದಂತೆ. ಕಾಲಿನ ಗೆಜ್ಜೆಯ ನಾದವೂ ಕೂಡ ಡೊಳ್ಳಿನ ಮಜಲಿಗೆ ಹಿನ್ನೆಲೆಯಾಗಿ ಕುಣಿತಕ್ಕೆ ಮೆರಗನ್ನು ತಂದುಕೊಡುತ್ತದೆ.

**ಅಡಿಟಿಪ್ಪಣಿ**

೧. ಡಾ. ಅರ್ಜುನಗೊಳಸಂಗಿ, ಉಪನ್ಯಾಸ ಗ್ರಂಥಮಾಲೆ, ಡೊಳ್ಳಿನ ಪದಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪

೨. ಕೆ.ವಿರೂಪಾಕ್ಷಗೌಡ, ಮೇಟಿ ಕೊಟ್ರಪ್ಪ (ಸಂ), ನಡಿಯಪ್ಪ ನಮ್ಮ ನಾಡಿಗೆ, ಬಳ್ಳಾರಿ ಜಿಲ್ಲೆಯ ಡೊಳ್ಳಿನ ಪದಗಳು, ಇದರಿಂದ ಮುದಿಮಲ್ಲಪ್ಪನವರು ಹಾಡಿದ ಹಾಡುಗಳನ್ನು ಬಳಸಿಕೊಳ್ಳಲಾಗಿದೆ.

೩. ಗೊ.ರು.ಚನ್ನಬಸಪ್ಪ, (ಸಂ), ಉತ್ತರ ಕರ್ನಾಟಕದ ಜನಪದ ಕಲೆಗಳು

೪. ಡಾ. ಶಿವಾನಂದ ಗುಬ್ಬಣ್ಣವರ, ದೇವ್ರ್ ಬಂದಾವ್ ಬನ್ನಿರೇ

# ೬

# ಸಮಾಕಾಲೀನತೆ ಮತ್ತು ಡೊಳ್ಳಿನ ಸ್ಥಿತ್ಯಂತರ

ಪ್ರಾಚೀನ ಕಾಲದಲ್ಲಿ ಧಾರ್ಮಿಕ, ಸಂಪ್ರದಾಯಿಕವಾಗಿ ಹಬ್ಬ - ಹುಣ್ಣಿಮೆ, ಜಾತ್ರೆ - ಉತ್ಸವಗಳಲ್ಲಿ ಡೊಳ್ಳಿನ ಕಲೆ ತನ್ನದೇ ಆದ ವೈಶಿಷ್ಟ್ಯವನ್ನು ಉಳಿಸಿಕೊಂಡಿತ್ತು. ಹಬ್ಬಗಳು ಬಂದರೆ ಸಾಕು ಎಲ್ಲೆಲ್ಲೂ ಸಂಭ್ರಮದ ಸಡಗರದ ವಾತಾವರಣದಲ್ಲಿ ಜನರು ಹೊಸ ಬಟ್ಟೆಗಳನ್ನು ಹಾಕಿಕೊಂಡು ದೇವಸ್ಥಾನದ ಮುಂದೆ ಡೊಳ್ಳು ಬಡಿತವನ್ನು ವೀಕ್ಷಿಸಲು, ಮುದುಕರಿಂದ ಹಿಡಿದು ಚಿಕ್ಕಮಕ್ಕಳವರೆಗೂ ಓಡೋಡಿ ಬರುತ್ತಿದ್ದರು. ಸಮಯದ ಪರಿವೇ ಇಲ್ಲದ ಹಾಗೆ ಡೊಳ್ಳು ಬಡಿತವನ್ನು ವೀಕ್ಷಿಸುವ ಕಾಲ ಆದಾಗಿತ್ತು. ಹಾಗೂ ಡೊಳ್ಳು ಬಡಿಯುವ ಕಲಾವಿದರಿಗೆ ಸಾಕಷ್ಟು ಗೌರವಾದರಗಳು ಸಿಗುತ್ತಿದ್ದ ಕಾಲವದು. ಯಾವುದೇ ಕಲೆಗೆ ಸಾಕಷ್ಟು ಪ್ರೋತ್ಸಾಹ ಸಿಗುತ್ತಿತ್ತು. ಅವುಗಳನ್ನು ಅಷ್ಟರ ಮಟ್ಟಿಗೆ ಜನರು ಪೋಷಿಸಿಕೊಂಡು ಬರುತ್ತಿದ್ದರು. ಪರಿಸ್ಥಿತಿ ಬದಲಾದಂತೆಲ್ಲಾ ಸಾಕಷ್ಟು ಜನಪದ ಪ್ರದರ್ಶನ ಕಲೆಗಳು ಕೂಡ ಬದಲಾವಣೆಗಳನ್ನು ಕಂಡವು.

ಡೊಳ್ಳನ್ನು ಬಡಿಯುವ ಕಲಾವಿದರೂ ಸಹ ಬಹುತೇಕವಾಗಿ ಹಿಂದೆ ಬಳಸುತ್ತಿದ್ದ ಪಟ್ಟುಗಳು, ಕುಣಿತಗಳಲ್ಲಿ ಇಂದು ಕೆಲವು ಬದಲಾವಣೆಗೊಂಡಿವೆ. ಇಂದಿನ ದಿನಗಳಲ್ಲಿ ಈ ಕಲೆಯನ್ನು ನೋಡುವವರು ಸಹ ಕಡಿಮೆ ಎಂದು ಹೇಳಬಹುದು. ಕಾರಣ ಪ್ರಸ್ತುತ ದಿನಗಳಲ್ಲಿ ಚಾಲ್ತಿಯಲ್ಲಿರುವ ಆಧುನಿಕ ಮನರಂಜನಾ ಮಾಧ್ಯಮಗಳು, ವಿಜ್ಞಾನವು ಸಹ ಒಂದು ರೀತಿಯಲ್ಲಿ ಪ್ರೇರಕವಾಗಿ ಕಂಡುಬಂದರೆ ಮತ್ತೊಂದು ಬದಿಯಲ್ಲಿ ಮಾರಕವು ಆಗಿದೆ. ವಿಜ್ಞಾನದಲ್ಲಿ ಇಂದು ಹೊಸ ಹೊಸ ಆವಿಷ್ಕಾರಗಳಾಗಿವೆ. ದಿನನಿತ್ಯವೂ ಸಹ ಒಂದಲ್ಲ ಒಂದು ರೀತಿಯ ಆವಿಷ್ಕಾರಗಳಲ್ಲಿ ತೊಡಗಿದೆ. ಇದರಲ್ಲಿ

ವಿಜ್ಞಾನದ ಪಾತ್ರವೂ ಸಹ ಒಂದು. ಡೊಳ್ಳಿನ ಕಲೆಯು ಹೆಚ್ಚಾಗಿ ಕುರುಬರು ಬಡಿಯುವದರಿಂದ ಇಂದಿನ ದಿನಗಳಲ್ಲಿ ಈ ಒಂದು ಕಲೆಯ ಉಪಯುಕ್ತತೆಯು ಕ್ಷೀಣಿಸುತ್ತಾ ಬರುತ್ತದೆ. ಪ್ರಸ್ತುತ ದಿನಗಳಲ್ಲಿ ಈ ಕಲೆಯ ಮೇಲೆ ತೀವ್ರ ಪೆಟ್ಟುಬಿದ್ದು ಈ ಕಲೆ ಕ್ಷೀಣಿಸುತ್ತಿದೆ. ಕಾರಣ ಹಿಂದಿನ ಕಾಲದಲ್ಲಿ ಕುರುಬರಿಗೆ ಮೀಸಲಾಗಿದ್ದ ಈ ಕಲೆ ಇಂದಿನ ದಿನಗಳಲ್ಲಿ ಉಪ್ಪಾರಾರು, ತಳವಾರು ಇತ್ಯಾದಿ ಜನಾಂಗಗಳು ಈ ಕಲೆಯನ್ನು ರೂಢಿಸಿಕೊಂಡಿದ್ದಾರೆ. ಹೀಗೆ ಇನ್ನು ಹೆಚ್ಚು ಸಮುದಾಯಗಳು ಈ ಕಲೆಯನ್ನು ರೂಢಿಸಿಕೊಳ್ಳುವ ಅವಶ್ಯಕತೆಯಿದೆ. ಈಗ ಇಂಥಹ ಕಲೆಯನ್ನು ಕರಗತ ಮಾಡಿಕೊಂಡವರು ಸಿಗುವುದು ಅಪರೂಪವಾಗಿದ್ದು, ಅದನ್ನು ನೋಡಿ ಆಸ್ವಾದಿಸುವವರೂ ಕೂಡ ಬೆರಳಣಿಕೆಯಷ್ಟೇ ಎಂದು ಹೇಳಬೇಕಾಗುತ್ತದೆ. ಏಕೆಂದರೆ ಅದನ್ನು ನೋಡುವುದಕ್ಕೆ ಮುಖ್ಯವಾಗಿ ತಾಳ್ಮೆ ಸಮಯದ ಸಂಯಮ ಬೇಕಾಗುತ್ತದೆ.

ಹಿಂದಿನ ಕಾಲದ ಜನರು ದೇವರ ಮೇಲೆ ಅಪಾರವಾದ ಶ್ರದ್ಧಾಭಕ್ತಿಯನ್ನು ಹೊಂದಿದ್ದರು. ಹಬ್ಬ ಹರಿದಿನಗಳು ಬಂದರೆ ಸಾಕು ದೇವರ ಕಾರ್ಯದಲ್ಲಿ ಡೊಳ್ಳಿನ ವಾದ್ಯ ಇಲ್ಲದಿದ್ದರೆ ಕಾರ್ಯಗಳು ನಡೆಸುವಂತಿರಲಿಲ್ಲ. ಎಷ್ಟೇ ಕಷ್ಟಬಂದರೂ ಡೊಳ್ಳಿನವರನ್ನು ಕರೆಸಿ, ದೇವರಕಾರ್ಯ ನಡೆಸುತ್ತಿದ್ದರು. ಇದರಿಂದ ಒಳ್ಳೆದಾಗುತ್ತದೆ ಎಂದು ಜನರು ನಂಬಿದ್ದರು. ಈ ಜನಪದ ನಂಬಿಕೆ ಇದ್ದುದರಿಂದಲೇ ಅಂದು ಈ ಕಲೆ ಬಹಳಷ್ಟು ಪ್ರಚುರತೆಯನ್ನು ಪಡೆದಿತ್ತು. ಕಾಲ ಕಳೆದಂತೆಲ್ಲಾ ನಂಬಿಕೆಯನ್ನು ಉಳಿಸಿಕೊಂಡಂತಹ ಜನಪದರು ಕಾಲವಾದಾಗ ಇಂದಿನ ಕಾಲಕ್ಕನುಗುಣವಾಗಿ ಬದಲಾವಣೆಯನ್ನು ಹೊಂದಿತು. ಹಿಂದೆ ಧಾರ್ಮಿಕ ಕ್ಷೇತ್ರದಲ್ಲಿ ಹೆಚ್ಚಾಗಿ ಬಳಸುತ್ತಿದ್ದ ಈ ಕಲೆಯನ್ನು ಇಂದು ಸಭೆ - ಸಮಾರಂಭಗಳಲ್ಲಿ ಹೆಚ್ಚಾಗಿ ಬಳಕೆಯಾಗಿ ಮನರಂಜನಾ ಕಲೆಯಾಗಿ ಮಾರ್ಪಾಡು ಹೊಂದಿದೆ.

ಸಂವಹನ ಮಾಧ್ಯಮಗಳಾದ ವೃತ್ತಪತ್ರಿಕೆ, ರೇಡಿಯೋ, ದೂರದರ್ಶನ ಮತ್ತು ಅಂತರ್ಜಾಲ (Internet) ಮತ್ತು ಹೊಸ ತಂತ್ರಜ್ಞಾನಗಳಲ್ಲಿ ಆದ ಕ್ರಾಂತಿಕಾರಕ ಬದಲಾವಣೆ ಇವುಗಳಿಗೆ ಪೂರಕವಾಗಿ ವೀಡಿಯೋ, ಆಡಿಯೋ ಮತ್ತು ಚಲನಚಿತ್ರಗಳು ತಮ್ಮ ಪ್ರಭಾವಗಳನ್ನು ಬೀರುತ್ತಿರುವುದರಿಂದ ಇಂಥ ಪ್ರದರ್ಶನ ಕಲೆಗಳು ಗಣನೀಯವಾಗಿ ಕಡಿಮೆಯಾದವು. ಪ್ರದರ್ಶನ ಕಲೆಗಳಿಗೆ ಪ್ರದರ್ಶನವಿಲ್ಲದಿದ್ದರೆ ಅವು ಉಳಿಯುವ ಸಾಧ್ಯತೆ ಕಡಿಮೆ. ಪ್ರದರ್ಶನ ಸಂದರ್ಭವೂ ಸಹ ಅವುಗಳ ಮೇಲೆ ಪರಿಣಾಮಗಳನ್ನು ಬೀರುತ್ತವೆ. ಈಗಿನ ಜನರು ಸಹ ಪ್ರದರ್ಶನ ಕಲೆಗಳನ್ನು ನಿರ್ಲಕ್ಷಿಸುತ್ತಿದ್ದಾರೆ. ಕಾರಣ ಹೊಸ ರೀತಿಯ ತಂತ್ರಜ್ಞಾನದಿಂದ ಕೂಡಿದ ಚಲನಚಿತ್ರಗಳು, ದೂರದರ್ಶನವೂ ಸಹ ಇದಕ್ಕೆ ಹೊರತಾಗಿಲ್ಲ. ಮತ್ತು ಪರದೇಶ ಸಂಸ್ಕೃತಿಯ ಪ್ರಭಾವಕ್ಕೆ ಸಿಲುಕಿ ಬರೀ ಶೋಕಿಗಾಗಿ ಯಾವುದಾದರೊಂದು ನೃತ್ಯವನ್ನು ನೋಡುವುದು. ಕೀಳು ಅಭಿರುಚಿಯನ್ನು ಬಿಂಬಿಸುವ ಚಲನಚಿತ್ರಗಳನ್ನು ನೋಡುವುದು ಸಹಜವಾಗಿದೆ. ಪ್ರದರ್ಶನ ಕಲೆಗಳ ಬಗ್ಗೆಯೂ ಸಹ ಸರಿಯಾಗಿ ತಿಳಿದಿಲ್ಲದ ಎಷ್ಟೋ ಜನರನ್ನು ನಮ್ಮ ಸುತ್ತ ಮುತ್ತಲೂ ನೋಡುತ್ತೇವೆ. ಒಟ್ಟಾರೆಯಾಗಿ ನೋಡಿದಾಗ ಆಧುನಿಕ ತಂತ್ರಜ್ಞಾನಗಳಿಂದ ಜನಪದ ಕಲೆಗಳು ಕ್ಷೀಣಿಸುತ್ತವೆ.

ಹಳ್ಳಿಗಳು ಕೂಡ ಇದಕ್ಕೆ ಹೊರತಾಗಿಲ್ಲ. ಏಕೆಂದರೆ ಎಲ್ಲರೂ ಬಯಸುವುದು ನವೀನ್ಯತೆಯನ್ನು ಹಳ್ಳಿಗಳಲ್ಲಿ ವಾಸಿಸುವ ಜನರು ತುಂಬಾ ಉತ್ಸಾಹದಿಂದ ಹಬ್ಬದ ದಿನಗಳಲ್ಲಿ ಡೊಳ್ಳು ಕುಣಿತವನ್ನು ನೋಡಲು ಪ್ರತಿಯೊಂದು ಕುಟುಂಬದ ಎಲ್ಲಾ ಸದಸ್ಯರು ಬಂದು ಕಲೆಯ ಸೌಂದರ್ಯವನ್ನು ಆಸ್ವಾದಿಸಲು ತಂಡೋಪತಂಡವಾಗಿ ಆಗಮಿಸುತ್ತಿದ್ದರು. ಹಳ್ಳಿಗಳಲ್ಲಿ ದೂರದರ್ಶನ ಪರಿಚಯ ಆದನಂತರ ಎಲ್ಲರೂ ಅದಕ್ಕೆ ಅಂಟಿಕೊಂಡು ಜಾತ್ರೆ - ಉತ್ಸವಗಳಲ್ಲಿ ನಡೆಯುವ ಹಲವು ಕುಣಿತಗಳನ್ನು ನೋಡಲಿಕ್ಕೆ ಜನರು ತಾತ್ಸರ ಭಾವನೆಯನ್ನು ತೋರಿಸುತ್ತಾರೆ ಹಾಗೂ ಅದರಲ್ಲೇನಿದೆ ಎಂದು ಮೂಗುಮುರಿದು ಮಾಯಲೋಕದ ಕಡೆಗೆ ಗಮನಹರಿಸುತ್ತಾರೆ.

ಪ್ರಸ್ತುತ ಸಂದರ್ಭದಲ್ಲಿ ಡೊಳ್ಳಿನ ಕಲಾವಿದರಿಗೆ ಸರಿಯಾಗಿ ಪೋಷಣೆ ಸಿಗುತ್ತಿಲ್ಲ. ಕಲೆಯನ್ನೇ ನಂಬಿಕೊಂಡು ಜೀವನ ಪೂರ್ತಿ ಅದರಲ್ಲೇ ಕಳೆದರು. ತಮ್ಮ ಸಂಸಾರದ ಪೋಷಣೆಗಾಗಿ ಬೇರೆ ಉದ್ಯೋಗವನ್ನು ಕೈಗೊಳ್ಳುವರು. ಹಿಂದೆ ಡೊಳ್ಳಿನ ಕಲಾವಿದರನ್ನು ಕಲೆಯ ಪ್ರದರ್ಶನಕ್ಕಾಗಿ ಕರೆಸಿಕೊಳ್ಳುವ ಸಂಪ್ರದಾಯ ರೂಢಿಯಲ್ಲಿತ್ತು. ಹಾಗೂ ಹಲವು ಹಳ್ಳಿಗಳಿಗೆ ಹೋಗಿ ಡೊಳ್ಳಿನ ಪ್ರದರ್ಶನವನ್ನು ನೀಡಿ ಬರುವಾಗ ದವಸ - ಧಾನ್ಯಗಳ ಜೊತೆಗೆ, ಪುಡಿಗಾಸನ್ನು ಹಳ್ಳಿಗರೇ ಕೊಟ್ಟು ಕಳುಹಿಸುವ ಪರಿಪಾಠವಿತ್ತು. ಇವತ್ತಿನ ಸಂದರ್ಭದಲ್ಲಿ ಅವರನ್ನು ಕೇಳುವವರಿಲ್ಲದಂತಾಗಿದೆ. ಮೊದಲಿದ್ದ ಗೌರವಾದರಗಳು ಕಡಿಮೆಯಾಗಿವೆ. ಇಂದು ಎಷ್ಟೋ ಪ್ರದರ್ಶನ ಕಲೆಗಳು ಕಣ್ಮರೆಯಾಗುತ್ತಿವೆ. ಹಿಂದಿನ ಜನರು ಯಾವುದೇ ಕಲೆಯನ್ನು ಆಸ್ವಾದಿಸುತ್ತಿದ್ದರು. ಕಲೆಗಳನ್ನು ಪೋಷಿಸುತ್ತಿದ್ದರು. ಅವುಗಳನ್ನು ಉಳಿಸಿ, ಬೆಳೆಸಿಕೊಂಡು ಹೋಗುತ್ತಿದ್ದರು. ಕಾಲದ ಬದಲಾವಣೆ ಯಿಂದ ಇಂದು ಈ ಪ್ರವೃತ್ತಿ ಕಡಿಮೆಯಾಗಿದೆ. ಕಲೆಗೆ ಮಾನ್ಯತೆ ದೊರೆಯದೆ ಎಷ್ಟೋ ಕಲಾವಿದರು ಎಲೆಮರೆ ಕಾಯಿಯಂತೆ ಜೀವನ ಸಾಗಿಸುತ್ತಿದ್ದರು.

ಡೊಳ್ಳಿನ ಕಲಾವಿದರಿಗೆ ಸರಿಯಾದ ಸ್ಥಾನಮಾನ ದೊರೆತಿಲ್ಲ. ಹಳ್ಳಿಗಳಲ್ಲಿ ರೇಡಿಯೋ ಮತ್ತು ದೂರದರ್ಶನಗಳು ಪರಿಚಯ ಆದಾಗಿನಿಂದ ಈ ಕಲೆಗೆ ಮೊದಲಿದ್ದ ಸ್ಥಾನಮಾನಗಳು ದೊರೆಯದೇ ಹೋದದ್ದು ವಿಪರ್ಯಾಸವೇ ಸರಿ. ದೂರದರ್ಶನವು ಸಹ ಎಲ್ಲಾ ಜನಪದ ಪ್ರದರ್ಶನ ಕಲೆಗಳನ್ನು ಪ್ರದರ್ಶನ ಸಂದರ್ಭದಲ್ಲಿ ಚಿತ್ರಿಕರಿಸಿಕೊಂಡು ಆಗಾಗ ಅವುಗಳನ್ನು ಬಿತ್ತಿರಿಸುತ್ತಿದೆ. ಆದರೆ ಅದು ಯಾವಾಗಲೋ ಇಂಥಹವುಗಳನ್ನು ತೋರಿಸುವುದರ ಬದಲಿಗೆ ಕನಿಷ್ಠ ಪಕ್ಷ ವಾರಕ್ಕೊಮ್ಮೆಯಾದರೂ ತೋರಿಸಿದರೆ ಜನರಿಗೆ ಉತ್ತಮವಾಗುತ್ತದೆ. ಶ್ರೀಸಾಮಾನ್ಯರಲ್ಲದೆ ಶಿಷ್ಠರಲ್ಲಿಯೂ ಕಲೆಗಳ ಪ್ರಜ್ಞೆಯನ್ನು ಹುಟ್ಟಿಸಬೇಕು. ಮತ್ತು ಪತ್ರಿಕೆಗಳಲ್ಲಿ ವಿವಿಧ ಕಲೆ ಮತ್ತು ಕಲಾವಿದರ ಪರಿಚಯ ಮಾಡಿಕೊಡುವುದಕ್ಕಾಗಿ ವಿಶೇಷ ಅಂಕಣಗಳ ಆವೃತ್ತಿಯನ್ನು ಬಿಡುಗಡೆ ಮಾಡಬೇಕು. ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಕಲೆಯನ್ನು ಪ್ರದರ್ಶಿಸಿದ ಕಲಾವಿದರು ನಮ್ಮಲ್ಲಿದ್ದಾರೆ. ಅವರನ್ನು ಗುರುತಿಸುವ ಜವಾಬ್ದಾರಿ ನಮ್ಮೆಲ್ಲರದು. ಸ್ಥಳೀಯ ಸಂಘ, ಸಂಸ್ಥೆಗಳು ಸರ್ಕಾರವು ಮುಂದೆ ಬಂದು ಜನಪದ ಕಲೆಗಳು ಮತ್ತು ಕಲಾವಿದರನ್ನು ಪ್ರೋತ್ಸಾಹಿಸಿ ಮಾಶಾಸನ ಮಂಜೂರು ಮಾಡಿ ಹಲವು ಕಾರ್ಯಕ್ರಮಗಳನ್ನು ನೀಡಿ ಪ್ರೋತ್ಸಾಹಿಸಬೇಕು. ಎಷ್ಟೋ ಕಲಾವಿದರು ವಾಸಿಸಲು ಸರಿಯಾದ

ಸೂರುಗಳು ಇಲ್ಲದೆ ಅರಕಲು - ಮುರಕಲು ಜೋಪಡಿಗಳಲ್ಲಿ ವಾಸಿಸುತ್ತಿದ್ದಾರೆ. ಅದಕ್ಕಾಗಿ ಸರ್ಕಾರದವರು ಅಂತಹ ಕಲಾವಿದರಿಗೆ ಮನೆಗಳನ್ನು ನಿರ್ಮಿಸಿಕೊಟ್ಟು, ಪ್ರತಿಯೊಂದು ತಾಲೂಕು, ಹೋಬಳಿ, ಗ್ರಾಮಗಳಲ್ಲಿ ಸ್ಥಳೀಯ ಜನಪದ ಕಲೆಗಳನ್ನು ಕುರಿತು ಕಾರ್ಯಕ್ರಮ ನಡೆಸಿ ಜೊತೆಗೆ ಕಲಾಮೇಳಗಳನ್ನು ಏರ್ಪಡಿಸಬೇಕು. ಯುವಜನಾಂಗಕ್ಕೆ ಜನಪದ ಕಲೆಗಳ ಬಗ್ಗೆ ವಿಶೇಷ ಆಸಕ್ತಿ ಹುಟ್ಟಿಸಿ ಜನಪದ ಕಲೆಗಳ ಜ್ಞಾನವನ್ನು ನೀಡಬೇಕು. ಶಾಲಾ - ಕಾಲೇಜು ಹಾಗೂ ವಿಶ್ವವಿದ್ಯಾಲಯಗಳಲ್ಲಿ ವಾರ್ಷಿಕ ಸಮಾರಂಭಗಳಲ್ಲಿ ಜನಪದ ಕಲೆಗಳ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಬೇಕು ಹಾಗೂ ವಾರ್ತಾ ಮತ್ತು ಪ್ರಚಾರ ಇಲಾಖೆಯವರು, ಜಿಲ್ಲಾ ಪರಿಷತ್ತು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹೆಚ್ಚು ಹೆಚ್ಚು ಜನಪದ ಕಲಾಮಹೋತ್ಸವಗಳನ್ನು ಏರ್ಪಡಿಸಬೇಕು. ಮತ್ತು ಕಲಾವಿದರ ಸಮಸ್ಯೆಗಳನ್ನು ತಿಳಿದುಕೊಳ್ಳಲು ಹಳ್ಳಿಗಳಲ್ಲಿ ತಿಂಗಳಿಗೊಮ್ಮೆಯಾದರೂ ಸಭೆನಡೆಸಿ ಕಲಾವಿದರ ಕುಂದು - ಕೊರತೆಗಳನ್ನು ನೀಗಿಸುವ ಕಾರ್ಯ ನಡೆಯಬೇಕು. ಇವುಗಳಿಂದಾಗಿ ಜನಪದ ಕಲೆಗಳು ನಶಿಸಿ ಹೋಗದಂತೆ ನೋಡಿಕೊಳ್ಳಲು ಸಹಾಯಕಾರಿಯಾಗುತ್ತದೆ.

ಕಂಪ್ಯೂಟರ್ ಯುಗ ಪ್ರಾರಂಭವಾದಾಗಿನಿಂದ ಎಷ್ಟೋ ಬದಲಾವಣೆಗಳು ಕಂಡುಬಂದವು. ಪ್ರತಿದಿನವು ಹೊಸ ಜಗತ್ತನ್ನು ತೋರಿಸುವ ಈ ಸಾಧನದಿಂದಾಗಿ ಅನಿವಾರ್ಯ ಎಂಬಂತೆ ಜನಪದ ಕಲೆಗಳು ಕಡಿಮೆಯಾಗಿ ಪರಿಣಮಿಸಿದವು. ಆದರೆ ಇಂಥ ಪ್ರದರ್ಶನ ಕಲೆಗಳನ್ನು ಮೂಲ ಸ್ವರೂಪದಲ್ಲಿ ಉಳಿಸಿಕೊಳ್ಳಬೇಕು. ಅದರಲ್ಲಿ ಯಾವ ಬದಲಾವಣೆಗಳಾಗಬಾರದು. ಜನಪದವನ್ನು ಮೂಲ ಸ್ಥಿತಿಯಲ್ಲಿಯೇ ಉಳಿಸಿಕೊಳ್ಳಬೇಕೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಒಟ್ಟಿನಲ್ಲಿ ಕಲೆ ಉಳಿಯಬೇಕು ಆದರೆ ಆ ಕಲೆಯ ಎಲ್ಲಾ ರೂಪಲಕ್ಷಣಗಳನ್ನು ಪಡೆದಿರಬೇಕು. ಯಾವುದೇ ಕಲೆ ಕಾಲಮಾನದ ಅಗತ್ಯಕ್ಕೆ ಅನುಗುಣವಾಗಿ ಬದಲಾವಣೆ ಹೊಂದುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಅನಿವಾರ್ಯವೆಂಬಂತೆ ಪ್ರಸ್ತುತ ದಿನಗಳಲ್ಲಿ ಡೊಳ್ಳು ಬಡಿಯುವ ಕಲಾವಿದರು ಸಹ ತಮ್ಮ ವಾದ್ಯ, ಪರಿಕರಗಳಲ್ಲಿ ಹಾಗೂ ವೇಷ ಭೂಷಣಗಳಲ್ಲಿ ಆಧುನಿಕತೆಗೆ ತಕ್ಕಂತೆ ಹೊಸ ಹೊಸ ಉಡುಗೆ - ತೊಡುಗೆಗಳಿಗೆ ಮಾರುಹೋಗಿದ್ದಾರೆ.

ಮುಂದುವರಿದ ಜಾತಿಗಳಲ್ಲಿರುವ ಪ್ರದರ್ಶನ ಕಲೆಗಳಾದ ವೀರಗಾಸೆ ಮೇಳ, ಯಕ್ಷಗಾನ, ಮೂಡಲಪಾಯ, ಇತ್ಯಾದಿ ಕಲೆಗಳನ್ನು ಕಲಿಯಲು ಆಯಾಜಾತಿಯ ವಿದ್ಯಾವಂತ ತರುಣರು ಮುಂದಾಗುತ್ತಾರೆ. ಹಾಗೂ ಕಲೆಗಳನ್ನು ಕಲಿಸಿಕೊಡುವ ಕೇಂದ್ರಗಳು ಆರಂಭವಾಗಿವೆ. ಅದರಂತೆ ಕೆಳಜಾತಿಯಲ್ಲಿರುವ ಕಲೆಗಳನ್ನು ಕಲೆಯುವಂತೆ, ಕಲಿಸಿಕೊಡುವ ಕೇಂದ್ರಗಳನ್ನು ಪ್ರಾರಂಭಿಸಬೇಕು. ಕಲೆ ಕೇವಲ ಒಂದು ಜನಾಂಗಕ್ಕೆ ಮೀಸಲಾಗಿರದೆ ಎಲ್ಲಾ ಜನಾಂಗದವರಿಗೆ ಮುಕ್ತವಾಗಿ ಕಲಿಸಿ ಕೊಡುವ ಕಲಾಮಂದಿರಗಳನ್ನು ಸ್ಥಾಪಿಸಿ, ಕಲೆಯ ತರಬೇತಿ ನೀಡಬೇಕು. ಜಾತಿ ಸೂಚಕವಾದ ಕಲೆಗಳನ್ನು ಸಹ ಇತರರಿಗೆ ಕಲ್ಪಿಸಿಕೊಡವ ವ್ಯವಸ್ಥೆ ಮಾಡಬೇಕು. ಇಂಥಹ ಪ್ರದರ್ಶನ ಕಲೆಗಳನ್ನು ಕಲಿಯಲು ವಿದ್ಯಾವಂತರು ಮುಂದಾಗಬೇಕು. ವಿದ್ಯಾವಂತರು ಪ್ರವೇಶ ಮಾಡಿದಾಗ ಈ ಕಲೆಗಳ ಬಗ್ಗೆ ಕೀಳರಿಮೆಯನ್ನು ತೆಗೆದುಹಾಕಲು ಸಹಾಯವಾಗುತ್ತವೆ. ಕುಲಕಸುಬಾಗಿ ಹರಿದುಬಂದ ಎಷ್ಟೋ ಕಲೆಗಳು ಇಂದಿನ ಸಮಾಜದಲ್ಲಿ ಅವು ಕೀಳೆಂಬ ಭಾವನೆ ಮೈದೋರಿ ವಿದ್ಯಾವಂತ

ಯುವಕರು ಅವುಗಳನ್ನು ಅಲಕ್ಷಿಸಿಸುತ್ತಿದ್ದಾರೆ. ಹೀಗೆ ಪರಂಪಾರಾನುಗತವಾಗಿ ಹರಿದುಬಂದ ಕಲೆಗಳನ್ನು ಬೆಳೆಸಿಕೊಂಡು ಹೋಗುವುದು ಧಾರ್ಮಿಕತೆಯ ಸಂಕೇತವಾಗಿದೆ.

ಆಧುನಿಕ ಅಥವಾ ನಾಗರಿಕತೆಗಳು ಜನಪದ ಕಲೆಗಳಿಗೆ ಮಾರಕವೆಂದು ಹೇಳುವುದಾದರೆ ನಮಗಿಂತ ನೂರುಪಟ್ಟು ಆಧುನೀಕರಣ ಹಾಗೂ ತಂತ್ರಜ್ಞಾನಕ್ಕೆ ಹೆಸರಾದ ಜಪಾನ್ , ಜರ್ಮನಿ ದೇಶದವರು ಏಕೆ? ನಮ್ಮ ಭಾರತೀಯ ಜನಪದ ಕಲೆಗಳಾದ ಡೊಳ್ಳು ಕುಣಿತಗಳನ್ನು, ತೊಗಲುಗೊಂಬೆಯಾಟಗಳನ್ನು, ವೀರಗಾಸೆ ಮೇಳಗಳನ್ನು ತಮ್ಮ ತಮ್ಮ ದೇಶಗಳಿಗೆ ಕರೆಸಿಕೊಂಡು ಅಪಾರವಾದ ಪ್ರೋತ್ಸಾಹ ಗೌರವಾದರಗಳನ್ನು ತೋರಿಸುತ್ತಿದ್ದಾರೆ. ಯಾವುದೇ ಜನಪದ ಕಲೆಗಳನ್ನು ಸಮಾಜದ ಅವಶ್ಯಕತೆಗಳಿಗನುಗುಣವಾಗಿ ಪರಿವರ್ತಿಸಿಕೊಂಡು ಕಲೆಗಳ ಉಳಿವು - ಬೆಳವಣಿಗೆಗೆ ಸಹಕರಿಸಲು ವಿಶೇಷ ಒತ್ತನ್ನು ಕೊಡಬೇಕು.

ನಾವೀಗ ೨೧ನೇ ಶತಮಾನದಲ್ಲಿದ್ದೇವೆ. ಅತ್ಯಂತ ಆಧುನಿಕ ಯುಗದಲ್ಲಿ ಮಾನವನ ದೀರ್ಘವಾದ ಇತಿಹಾಸದಲ್ಲಿ ಕಳೆದ ಐವತ್ತು ವರ್ಷಗಳ ಆಗು - ಹೋಗುಗಳನ್ನು ಮೇಲುಕುಹಾಕಿದರೆ ಪ್ರಸ್ತುತ ದಿನಗಳಲ್ಲಿ ಅಚ್ಚರಿಯನ್ನುಂಟುಮಾಡುತ್ತವೆ. ಆದುದರಿಂದ ಭಾರತೀಯ ಸಂಸ್ಕೃತಿಯ ಪ್ರತೀಕವಾದ ಇಂಥಹ ಕಲೆಗಳ ಪರಂಪರೆಗಳನ್ನು ಉಳಿಸಲು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ. ಪ್ರಸ್ತುತ ಅಧ್ಯಯನದ ಮೂಲ ಉದ್ದೇಶ ಇದೇ ಆಗಿದೆ.

# ೭

# ಸಮಾರೋಪ

ಜಾನಪದ ಜಗತ್ತಿನ ಮೂಲದಿಂದ ಬೆಳೆದುಬಂದಿರುವ ಡೊಳ್ಳುಕಲೆ ಇಂದಿಗೂ ಒಂದು ಜೀವಂತ ಸೃಜನಶೀಲ ಪ್ರದರ್ಶನ ಕಲೆಯಾಗಿ ಉಳಿದಿದೆ. ಈಗ ಆಧುನಿಕತೆಯಲ್ಲಿ ಚಲನಚಿತ್ರ, ನಾಟಕ ಮತ್ತು ದೂರದರ್ಶನಗಳಂತಹ ಸಂವಹನ ಮಾಧ್ಯಮಗಳಿದ್ದರು ಕೂಡ ಈ ಡೊಳ್ಳು ಕಲೆಗೆ ಯಾವುದೇ ಚ್ಯುತಿ ಬಂದಿಲ್ಲ. ಭಾರತೀಯ ಜನಪದ ಕಲೆಗಳು ವಿಶಿಷ್ಟ ಸ್ಥಾನವನ್ನು ಗಳಿಸಿವೆ. ಇವು ಬಹುತೇಕ ನಾಗರೀಕರ ಹೃದಯಾಂತರಾಳವನ್ನು ಹೊಕ್ಕು ಬೇರೂರಿವೆ. ಡೊಳ್ಳುಕುಣಿತ ಉತ್ತರ ಕರ್ನಾಟಕದ ತನ್ನ ಪ್ರಾದೇಶಿಕ ಸೀಮೆಯನ್ನು ಮೀರಿ, ದೆಹಲಿ, ಮದ್ರಾಸ್, ಭೂಪಾಲ್, ತಂಜಾವೂರ್, ಪಾಂಡಿಚೇರಿ, ಮಧ್ಯಪ್ರದೇಶ, ಕಲ್ಕತ್ತಾ, ಪೂನಾ ಇನ್ನಿತರ ದೇಶದ ನಾನಾ ನಗರಗಳಲ್ಲಿ ತನ್ನ ಜಾನಪದ ಸೊಗಡನ್ನು ಹರಡಿ, ಆಯಾದೇಶಗಳ ಸಾಂಸ್ಕೃತಿಕ ಬದುಕಿನಲ್ಲಿ ಪ್ರಭಾವವನ್ನು ಬೀರಿದೆ. ಜಾನದಪ ಕಲಾ ಪ್ರಕಾರಗಳಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಉಳಿಸಿಕೊಂಡು, ಭಾರತೀಯ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದೆ. ಗ್ರಾಮೀಣ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿರುವ ಈ ಕಲೆಯ ಮಹತ್ವ ಸಾಮಾನ್ಯ ಜನರಿಗೆ ಮನವರಿಕೆ ಮಾಡಿಕೊಡುವುದರಲ್ಲಿ ಉತ್ತಮ ಪಾತ್ರವಹಿಸುತ್ತದೆ.

ಜನಸಾಮಾನ್ಯರ ನಡುವಿನ ಕೊಂಡಿಯಾಗಿ ಮುದಿಮಲ್ಲಪ್ಪನವರು ಬದುಕಿದ್ದರು. ಅವರ ಖಾಸಗಿ ಜೀವನವಂತೂ ಸರಳ - ಸಹಾ - ಸಾಚಾತನದಿಂದ ಕೂಡಿತ್ತು. ಜೊತೆಗೆ ಕರುಣಾಜನಕವೂ ಆಗಿತ್ತು. ಬಡತನದಲ್ಲಿಯೇ ಹುಟ್ಟಿದರು. ಬಡತನದಲ್ಲಿಯೇ ಬದುಕಿದರು. ಬಡತನದಲ್ಲಿಯೇ ಕೊನೆಯುಸಿರೆಳೆದರು. ಅವರು ಮುರುಕಲು ಗುಡಿಸಲು

ಮನೆಯಲ್ಲೇ ತಮ್ಮ ಬದುಕಿನ ಬಹುಪಾಲನ್ನು ಸೊನ್ನದ ಗ್ರಾಮದಲ್ಲಿ ಕಳೆದರು. ತಮ್ಮ ಮನೆತನದ ಹಿರಿಯ ಮಗನಾಗಿದ್ದು, ತಾವೂ ಬದುಕಿರುವವರೆಗೂ ಮನೆತನದ ಜವಾಬ್ದಾರಿಯನ್ನು ತಾವೇ ಹೊತ್ತಿದ್ದರು. ಹಲವು ದೇಶಗಳಿಗೆ ಹೋಗಿಬಂದಿದ್ದರೂ ಅಹಂಭಾವ ಅವರ ಬಳಿ ಸುಳಿಯಲಿಲ್ಲ. ಅವರ ಮಾತಿನಲ್ಲಿ ಸರಳತೆ ಎದ್ದು ಕಾಣುತ್ತಿತ್ತು. ಡೊಳ್ಳಿನ ಕಲೆಗೆ ಸೇವೆ ಸಲ್ಲಿಸಿದವರಲ್ಲಿ ಪ್ರಮುಖರಾಗಿದ್ದ ಮುದಿಮಲ್ಲಪ್ಪನವರು ತಮ್ಮ ಹಳ್ಳಿಗಳಲ್ಲಿ ಡೊಳ್ಳಿನ ಮುದಿಮಲ್ಲಪ್ಪ ಎಂಬ ನಾಮಧೇಯದಿಂದ ಪ್ರಸಿದ್ಧರಾಗಿದ್ದರು.

ಕಲೆ ಸಂಸ್ಕೃತಿಯ ಒಂದು ಅಂಗ. ಒಂದು ಸಮುದಾಯದ ಕಲೆ, ಜನಜೀವನಗಳು ಆ ನಾಡಿನ ಸಂಸ್ಕೃತಿಯನ್ನು ಎತ್ತಿಹಿಡಿಯುತ್ತದೆ. ಸಂಸ್ಕೃತಿಯ ಜೀವಂತಿಕೆಯ ಹಿಂದೆ ಹಲವು ವ್ಯಕ್ತಿಗಳ ಕಾಯಕದ ಶಕ್ತಿ ಚೈತನ್ಯವಿದೆ. ಬದುಕನ್ನೇ ಕಲೆ ಸಂಸ್ಕೃತಿಗಾಗಿ ಮುಡುಪಾಗಿಟ್ಟು ಬೆಳೆಸಿಕೊಂಡು ಬಂದವರು ಶ್ರೀ ಮುದಿಮಲ್ಲಪ್ಪನವರು. ನಾಡಿನ ಡೊಳ್ಳುಕಲೆಯ ಅಧ್ಯಯನದಲ್ಲಿ ಅಂತಹ ಕಲಾವಿದರ ಜೀವನ ಹಾಗೂ ಸಾಧನೆಯ ಕೊಡುಗೆ ಅಷ್ಟೇ ಮಹತ್ವ ಪೂರ್ಣವಾದುದು. ನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಹಿನ್ನೆಲೆಯಲ್ಲಿ ಕಲಾವಿದರಾದ ಮುದಿಮಲ್ಲಪ್ಪನವರ ಜೀವನ ಹಾಗೂ ಸಾಧನೆಯ ಬಗ್ಗೆ ಸಂಪ್ರಬಂಧ ರೂಪಗೊಂಡಿದೆ.

ಮುದಿಮಲ್ಲಪ್ಪನವರ ಜೀವನ ಹಾಗೂ ಸಾಧನೆ ಎಂಬ ಸಂಶೋದನಾತ್ಮಕ ಪ್ರಬಂಧದ ವ್ಯಾಪ್ತಿ ಏಳು ಅಧ್ಯಾಯಗಳನ್ನೊಳಗೊಂಡಿದೆ. ಅಧ್ಯಯನದ ಉದ್ದೇಶ ಮತ್ತು ಮಹತ್ವಕ್ಕೆ ಸಂಬಂಧದ ವಿಷಯವು ಒಂದನೇ ಅಧ್ಯಾಯನದಲ್ಲಿ ಒಳಪಟ್ಟಿದೆ. ಅಧ್ಯಾಯ ಎರಡರಲ್ಲಿ ಬಳ್ಳಾರಿ ಜಿಲ್ಲಾ ಹಗರಿಬೊಮ್ಮನಹಳ್ಳಿ ತಾಲೂಕು 'ಸೊನ್ನ' ಗ್ರಾಮದಂಥ ಪುಟ್ಟಜಾಲಿಯ ಹೂವಿನ ಜನಪದ ಕಂಪನ್ನು ತುಂಬಿಕೊಂಡಿರುವ ಗ್ರಾಮದ ಭೌಗೋಳಿಕ ಪರಿಸರವನ್ನು ವಿವರಿಸಲಾಗಿದೆ. ಡೊಳ್ಳಿನ ಕಲಾ ಪ್ರಪಂಚಕ್ಕೆ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಕಲಾವಿದ ಶ್ರೀ ಮುದಿಮಲ್ಲಪ್ಪನವರ ಜನನ ಹಾಗೂ ಬಾಲ್ಯಜೀವನ ಹಾಗೂ ಚಿಕ್ಕವಯಸ್ಸಿನಲ್ಲಿಯೇ ತಂದೆ - ತಾಯಿಗಳಿಂದ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸಿದ ಕೌಟುಂಬಿಕ ಜೀವನವನ್ನು ಜೊತೆಗೆ ಸಮಾಜದಲ್ಲಿ ಶ್ರೀ ಸಾಮಾನ್ಯರಂತೆ ಬಾಳಿ ಬದುಕಿದ ಸಾಮಾಜಿಕ ಜೀವನ ಹಾಗೂ 'ಹಾಸಿಗೆ ಇದ್ದಷ್ಟು ಕಾಲು ಚಾಚು' ಎಂಬ ಗಾದೆಯಂತೆ ಅಲ್ಪ ಆದಾಯದ ಆರ್ಥಿಕ ಜೀವನವನ್ನು ಹಗಲು ರಾತ್ರಿಯನ್ನದೆ ದುಡಿದ ಈ ಶ್ರಮಜೀವಕ್ಕೆ ಹಲವು ಖಾಯಿಲೆ - ಕಸಾಲೆ ಬಂದು ಕೊನೆಗಾಲದಲ್ಲಿ ಅವರನ್ನು ಮಮ್ಮಲು - ಮರುಗುವಂತೆ ಮಾಡಿ ಶ್ರೀಯುತರ ಭೀಮಕಾಯದಂತ ದೇಹವನ್ನು ತಣ್ಣಗೆ ಮಣ್ಣಲ್ಲಿರಿಸಿದ ಕೊನೆಯ ದಿನಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಅಷ್ಟ ವಾದ್ಯಗಳಲ್ಲಿಯೇ ಶ್ರೇಷ್ಠವಾದ ಚರ್ಮವಾದ್ಯವಾದ ಡೊಳ್ಳಿನ ಪದ ನಿಷ್ಪತ್ತಿ, ಕನ್ನಡ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಿತವಾಗಿರುವ ವ್ಯಾಖ್ಯಾನಗಳು. ಜನಪದದ ಎಲ್ಲಾ ಕಲೆಗಳ ಹುಟ್ಟುವಿಕೆಗೆ ತಮ್ಮದೇ ಆದ ಪುರಾಣ ಕಥಾಂಶಗಳನ್ನು ಹೊಂದಿರುತ್ತವೆ. ಅದರಂತೆಯೇ ಉತ್ತರಕರ್ನಾಟಕದ ಜನಪದ ಕಲೆಗಳಲ್ಲಿ ಪ್ರಮುಖವಾದ ಕಲೆ, ಡೊಳ್ಳಿನ ಕಲೆಯ ಹುಟ್ಟುವಿನ ಬಗ್ಗೆ ಪುರಾಣದಲ್ಲಿ ಉಲ್ಲೇಖಿತವಾಗಿರುವುದನ್ನು ಹಾಗೂ ಡೊಳ್ಳಿನ ಬೆಳವಣಿಗೆಯ ಜೊತೆಗೆ ಸ್ವತಃ ಕುರುಬರು ತಯಾರಿಸುವ

ಡೊಳ್ಳುವಾದ್ಯಕ್ಕೆ ಬೇಕಾಗಿರುವ ಸಾಮಾಗ್ರಿಗಳೊಂದಿಗೆ, ಡೊಳ್ಳಿನ ರಚನೆ ಮತ್ತು ಡೊಳ್ಳಿನ ವೈಲಕ್ಷಣಗಳನ್ನು ವಿಶ್ಲೇಷಿಸಲಾಗಿದೆ. ನಾಲ್ಕನೇ ಅಧ್ಯಾಯವು ಮುದಿಮಲ್ಲಪ್ಪನವರು ತಮ್ಮ ಜೀವಿತದ ಬಹುಪಾಲನ್ನು ತಾತಾ - ಮುತ್ತಾತರ ಕಾಲದಿಂದಲೂ ರಕ್ತಗತವಾಗಿ ಹರಿದುಬಂದ ಡೊಳ್ಳಿನ ಕಲೆಗೆ ಮೀಸಲಾಗಿಟ್ಟು, ಸಾಕಷ್ಟು ಊರು - ಕೇರಿಗಳಿಗೆ, ದೇಶ ನಗರಗಳಿಗೆಲ್ಲಾ ಕೊಟ್ಟಬಂದಂತಹ ಡೊಳ್ಳಿನ ಪ್ರದರ್ಶನಗಳ ಕಾರ್ಯಕ್ರಮಗಳ ಸ್ಥಳಗಳ ವಿವರ, ಜೊತೆಗೆ ಕಲೆಯ ಉಳುವಿಗಾಗಿ ಶ್ರಮಿಸಿ, ಬೆಳೆಸುವುದಕ್ಕಾಗಿ ಅನೇಕ ಹಳ್ಳಿ ನಗರಗಳಲ್ಲಿ ಕಲೆಯ ಬಗ್ಗೆ ಆಸಕ್ತಿ ಮೂಡಿಸಿ ಡೊಳ್ಳಿನ ತರಬೇತಿಯನ್ನು ನೀಡಿರುವ ತಂಡಗಳ ವಿವರ ಹಾಗೂ ಸೂಕ್ಷ್ಮವಾದ ಕಲಾ ಪ್ರಜ್ಞೆಯನ್ನು ಗುರುತಿಸಿಕೊಂಡು ಶ್ರೀಯತರ ಮಡಿಲಿಗೆ ಹಲವಾರು ಪ್ರಶಸ್ತಿಗಳು ಹುಡುಕಿಕೊಂಡು ಬಂದಿರುವ ಮತ್ತು ಡೊಳ್ಳುಕಲೆಯನ್ನು ಹಳ್ಳಿಯಿಂದ ದೆಹಲಿಗೆ ಕರೆದೊಯ್ದು ಅಖಿಲಭಾರತದ ಮಟ್ಟಕ್ಕೆ ಈ ಕಲೆಯನ್ನು ತೆಗೆದುಕೊಂಡು ಹೋಗಿ ಅನೇಕ ರಾಷ್ಟ್ರಗಳ ಸಾಂಸ್ಕೃತಿಕ ರಂಗದಲ್ಲಿ ಭಾರತೀಯ ಸಂಸ್ಕೃತಿಯ ಪ್ರತೀಕವಾದ ಡೊಳ್ಳುಕಲೆಯ ಮಹತ್ವವನ್ನು ಪ್ರಭಾವ ಬೀರುವಂತೆ ಮಾಡಿದ ಮುದಿಮಲ್ಲಪ್ಪನವರ ವ್ಯಕ್ತಿತ್ವ ಮತ್ತು ಕಾರ್ಯಸಾಧನೆಯನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ.

ಐದನೇ ಅಧ್ಯಾಯವು ಶ್ರೀಯತರು ಓದು - ಬರಹ ಕಲಿಯದ ಅವಿದ್ಯಾವಂತರಾಗಿದ್ದರೂ ತಮ್ಮ ಜನಪದ ಸೊಗಡಿನಲ್ಲಿ ಬೀರಪ್ಪ, ಮಳೆರಾಯ, ಭರಮಣ್ಣ, ಕಾಮವ್ವ, ಸೂರವ್ವ, ರೋಣದಹಾಡು, ಇತ್ಯಾದಿ ಡೊಳ್ಳಿನ ಹಾಡುಗಳನ್ನು ಸೊಗಸಾಗಿ ಹಾಡಿ ಜನಪದ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಸುಮಾರು ៤೦ ವರ್ಷಗಳ ಕಾಲ ಡೊಳ್ಳುಕುಣಿತದಲ್ಲಿ ಹಣ್ಣಾಗಿ - ಮಣ್ಣಾಗಿರುವ ಆ ಜೀವ ಡೊಳ್ಳಿನ ಕಲೆಗೆ ಬಳಸುತ್ತಿದ್ದ ಪಟ್ಟುಗಳೊಂದಿಗೆ, ಕಾಲುಮಂಡಿ ಬಡಿತ, ಮರಗಾಲು ಬಡಿತ, ಲಾಗಹಾಕುವುದು, ಹಾರಿಬಾರಿಸುವುದು ಇತ್ಯಾದಿ ಬಡಿತ - ಕುಣಿತಗಳ ವೈಶಿಷ್ಟ್ಯವನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಆರನೇ ಅಧ್ಯಾಯವು ಪ್ರಾಚೀನ ಕಾಲದಲ್ಲಿ ಡೊಳ್ಳಿಗೆ ಇದ್ದ ಮಹತ್ವ ಹಾಗೂ ಆದುನಿಕ ಯುಗದಲ್ಲಿನ ಡೊಳ್ಳಿಗೆ ಇರುವ ಮಹತ್ವದ ಸಮಕಾಲೀನತೆಯ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಏಳನೇ ಅಧ್ಯಾಯದಲ್ಲಿ ಮೇಲಿನ ಆರು ಅಧ್ಯಾಯಗಳ ಒಟ್ಟು ಫಲಿತವನ್ನು ಸಮೀಕ್ಷಿಸಲಾಗಿದೆ.

ಕೊನೆಯ ಅನುಬಂಧದಲ್ಲಿ ಮುದಿಮಲ್ಲಪ್ಪನವರಿಗೆ ಸಂಬಂಧಪಟ್ಟ ಸುತ್ತೋಲೆಗಳು, ಹಲವು ಛಾಯಚಿತ್ರಗಳು ಹಾಗೂ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ವಕ್ತೃಗಳ ವಿವರ ಮತ್ತು ಗ್ರಂಥಋಣವನ್ನು ನೀಡಲಾಗಿದೆ.

## ಸುತ್ತೋಲೆಗಳು



ಕರ್ನಾಟಕ ಸರ್ಕಾರ

### ರಾಜ್ಯೋತ್ಸವ ಪ್ರಶಸ್ತಿ-೧೯೯೦

ಶ್ರೀ ಹೆಮ್ಮಿಗಿ ಮುದಿಮಲ್ಲಪ್ಪ

ಸನ್ಮಾನ್ಯರೆ,

ತಾವು ಜಾನಪದ ಕ್ಷೇತ್ರದಲ್ಲಿ
ಸಲ್ಲಿಸಿರುವ ಅನುಪಮ ಸೇವೆಯನ್ನು
ಕೃತಜ್ಞತೆಯಿಂದ ಸ್ಮರಿಸುತ್ತ ಕರ್ನಾಟಕ ಸರ್ಕಾರವು
೧೯೯೦ನೆಯ ಸಾಲಿನ ರಾಜ್ಯೋತ್ಸವ ಪ್ರಶಸ್ತಿಯನ್ನು
ತಮಗೆ ನೀಡಿ ಗೌರವಿಸಲು ಹರ್ಷಿಸುತ್ತದೆ.

(ಎಂ.ಬಿ.ಪ್ರಕಾಶ್)
ಕಾರ್ಯದರ್ಶಿಗಳು
ವಾರ್ತಾ, ಪ್ರವಾಸೋದ್ಯಮ
ಹಾಗೂ ಯುವಜನ ಸೇವೆಗಳು

(ಬ. ಪಾರ್ಥಸಾರಥಿ)
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಬೆಂಗಳೂರು * ೧ ನವೆಂಬರ್ ೧೯೯೦



# ಕನ್ನಡ ಸಾಹಿತ್ಯ ಪರಿಷತ್ತು

ಬಳ್ಳಾರಿ ಜಿಲ್ಲಾ ಘಟಕ
ಕೇರಾಳ ರಸ್ತೆ, ರಾಮನಗರ, ಹಗರಿಬೊಮ್ಮನಹಳ್ಳಿ 583 212
ಬಳ್ಳಾರಿ ಜಿಲ್ಲೆ ದೂರವಾಣಿ : 3

ಅಧ್ಯಕ್ಷರು
ಗುರುಮೂರ್ತಿ ಎ. ಪೆಂಡಕೂರು

ಪ್ರಧಾನ ಕಾರ್ಯದರ್ಶಿ
ಗುರುಸ್ವಾಮಿ ಇನಾಂದಾರ

ಕ್ರಮಸಂಖ್ಯೆ..................

ದಿನಾಂಕ 26.10.90

ಶ್ರೀ ದುಮ್ಮಿ ಮುದಿಮಲ್ಲಪ್ಪ
ಸೊನ್ನ

ಮಾನ್ಯರೆ,

ಈ ದಿನ ಪತ್ರಿಕೆಯಲ್ಲಿ ನಿಮಗೆ ಕರ್ನಾಟಕ ~~ರಾಜ್ಯೋತ್ಸವ~~ ಪ್ರಶಸ್ತಿಯನ್ನು ಸರಕಾರ ನೀಡಿದ ವಿಷಯ ಓದಿ ಸಂತೋಷವಾಯಿತು.

ನಿಮಗೆ ಇದೇ ರೀತಿ ಪ್ರಶಸ್ತಿಗಳು ದೊರೆಯಲಿ ಆಯುರಾರೋಗ್ಯ ಭಾಗ್ಯಗಳು ಲಭಿಸಲಿ ಎಂದು ಹಾರೈಸುವೆ.

ತಮ್ಮ
[signature]

# गणतन्त्र दिवस समारोह, मध्यप्रदेश भोपाल

## प्रमाण-पत्र

श्री/श्रीमती/सुश्री मुदीमल्लप्पा सोन्ना बल्लारी (कर्नाटक) को गणतन्त्र दिवस समारोह में झाँकी/लोक नृत्य/लोक गायन में सम्मिलित होने के लिए यह प्रमाण-पत्र प्रदान किया जाता है।

भोपाल
२६ जनवरी १९८७

अशोक वाजपेयी
संस्कृति सचिव
मध्यप्रदेश शासन
भोपाल



Phone : 369703

THE KARNATAKA WELFARE ASSOCIATION FOR THE BLIND (Regd. S. No. 197)

ಕರ್ನಾಟಕ ಅಂಧರ ಕ್ಷೇಮಾಭ್ಯುದಯ ಸಂಸ್ಥೆ

(Affiliated to All India Confederation of the Blind, Delhi, NaSEOH., Bombay)

No. 69, NEHRUNAGAR (Near Kino Theatre), S. C. ROAD, BANGALORE-560 020 KARNATAKA—INDIA

SILVER JUBILEE YEAR 1991 - 92

ಶ್ರೀ ಗೋ. ರು. ಚನ್ನಬಸಪ್ಪ
ಅಧ್ಯಕ್ಷ

No. / 1738/90-91

Date : 29.10.1990

ಹಬ್ಬಿಗಿ ಮುದಿಮಲ್ಲಪ್ಪ ಅವರಲ್ಲಿ ಪ್ರಣಾಮಗಳು,

ಮಾನ್ಯರೆ,

ಹೃತ್ಪೂರ್ವಕ ಅಭಿನಂದನೆಗಳು. ಸಲ್ಲಿಸಿದ ಸೇವೆಗೆ ಮನ್ನಣೆ ದೊರೆತಾಗ ಅಭಿಮಾನಿಗಳಿಗೆ ಸಹಜವಾಗಿ ಹೃದಯ ತುಂಬಿ ಬರುತ್ತದೆ. ತಾವು ನಮ್ಮ ಸಂಸ್ಥೆಯ ಹಿತೈಷಿಗಳಲ್ಲಿ ಒಬ್ಬರಾಗಿರುವುದರಿಂದ ತಮಗೆ ಈ ಸಲದ ರಾಜ್ಯ ಪ್ರಶಸ್ತಿ ಬಂದಿರುವುದು ನಮಗೆ ಇಮ್ಮಡಿ ಹರ್ಷವುಂಟುಮಾಡಿದೆ.

ನಾಡಿನ ಜಾನಪದ ಕಲಾ ಕ್ಷೇತ್ರಕ್ಕೆ ತಮ್ಮಿಂದ ಮೌಲಿಕವಾದ ಕಾಣಿಕೆ ಸಂದಿದೆ. ಇದನ್ನು ನಮ್ಮ ಸಂಸ್ಥೆ ಮನಸಾರೆ ನೆನೆಯುತ್ತದೆ.

ತಮಗೆ ಮತ್ತೊಮ್ಮೆ ಹಾರ್ದಿಕ ಅಭಿನಂದನೆಗಳು.

ಇಂತು ಪ್ರಣಾಮಗಳು,

(ಗೋ. ರು. ಚನ್ನಬಸಪ್ಪ)
ಅಧ್ಯಕ್ಷ

ಶ್ರೀ ಹಬ್ಬಿಗಿ ಮುದಿಮಲ್ಲಪ್ಪನವರು,
ದೊಳ್ಳು ಕಲಾವಿದರು,
ಸೊನ್ನ,
ಹಡಗಲಿ ತಾಲ್ಲೂಕು,
ಬಳ್ಳಾರಿ ಜಿಲ್ಲೆ.



ಪ್ರಶಸ್ತಿ ಪತ್ರ

ಕೊಪ್ಪಳದಲ್ಲಿ ಜರುಗಿದ

ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ

ಪ್ರಶಂಸಾ ಪತ್ರವನ್ನು ನೀಡಲಾಗಿದೆ

ಶ್ರೀ ಗೋ. ರು. ಚನ್ನಬಸಪ್ಪ
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು

ಅಧ್ಯಕ್ಷರು
ಸ್ವಾಗತ ಸಮಿತಿ
ಕೊಪ್ಪಳ

ಮುದಿಯಪ್ಪ ಕವಲೂರು
ಅಧ್ಯಕ್ಷರು, ಮೆರವಣಿಗೆ ಸಮಿತಿ.

ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ
ಕೊಪ್ಪಳ




# SOUTH ZONE CULTURAL CENTRE

Sangeetha Mahal, Palace Complex
Thanjavur

*Certificate of appreciation awarded to*

MUDIMALLAPPA (KARNATAKA)

*for participation in*

*FETE DE PONDICHERRY*
*held in August, 1987*

*Organised by the South Zone Cultural Centre, Thanjavur*

Thanjavur
Dated 17.8.87

M. Sheela Priya
Director

---

ಸ್ಥಾಪನೆ: ೧೯೧೫  ದೂರವಾಣಿ: ೬೨೯೯೦

## ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮

ಕ್ರಮಸಂಖ್ಯೆ ಪರಿಷದ-51/76 ಜಾನಪದ ವಿಭಾಗ ದಿನಾಂಕ 21.10.76

ಆತ್ಮೀಯರೆ

ರಾಜ್ಯಮಟ್ಟದ ಜನಪದ ಕಲಾಮಹೋತ್ಸವ ಹತ್ತಿರವಾಗುತ್ತಿದೆ. ಬಹುಶಃ ನಿಮ್ಮ ಕಲೆಯ ಪೂರ್ವಾಭ್ಯಾಸವು ಅಷ್ಟೇ ತ್ವರಿತಗತಿಯಲ್ಲಿ ನಡೆಯುತ್ತಿರಬಹುದು. ಈಗಾಗಲೆ ಅನೇಕ ಬಾರಿ ತಿಳಿಸಿರುವಂತೆ ನಿಮಗೆ ಕಳುಹಿಸಿರುವ ಆಹ್ವಾನ ಸೂಚನಾ ಪತ್ರದಲ್ಲಿ ಕೊಟ್ಟಿರುವ ಅಂಶಗಳನ್ನು ಮತ್ತೆ ಮತ್ತೆ ಗಮನಿಸಿ ಅದರ ಪ್ರಕಾರವೆ ನೀವು ನಡೆದುಕೊಳ್ಳುತ್ತೀರೆಂದು ಭಾವಿಸಿದ್ದೇನೆ.

ಮೊಟ್ಟಮೊದಲ ಬಾರಿಗೆ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿರುವ ರಾಜ್ಯಮಟ್ಟದ ಈ ಪ್ರದರ್ಶನ ನೋಡಲು ಬೆಂಗಳೂರಿನ ಸಹಸ್ರಾರು ಜನ ಕಲಾಭಿಮಾನಿಗಳು ಆತುರದಿಂದಿದ್ದಾರೆ. ಮಹೋತ್ಸವದ ಚಲನಚಿತ್ರೀಕರಣಕ್ಕೆ ಸಿದ್ಧತೆಯಾಗಿದೆ. ಮಾನ್ಯ ಮುಖ್ಯಮಂತ್ರಿಗಳು ಮಹೋತ್ಸವವನ್ನು ಉದ್ಘಾಟಿಸಲು ದಯಮಾಡಿ ಒಪ್ಪಿರುತ್ತಾರೆ. ಸದ್ಯದಲ್ಲೇ ಆಹ್ವಾನ ಕರಪತ್ರಗಳನ್ನು ನಿಮಗೆ ಕಳುಹಿಸಲಾಗುತ್ತದೆ. ನೀವು ನಿಮ್ಮ ತಂಡದ ಸದಸ್ಯರೊಡನೆ 12.11.1976ನೇ ಶುಕ್ರವಾರ ಸಂಜೆ ಇಲ್ಲಿರುವಂತೆ ಆಗಮಿಸಬೇಕಾಗಿ ಕೋರುತ್ತೇನೆ.

ವೇಷಭೂಷಣ, ವಾದ್ಯವಿಶೇಷ, ಪ್ರಯಾಣದಲ್ಲಾದ ಸಿದ್ಧತೆ ಬಗ್ಗೆ ಮತ್ತೆ ನೆನಪು ಮಾಡಿಕೊಡುತ್ತಿದ್ದೇವೆ. ದಯಮಾಡಿ ಸಾಧ್ಯವಾದಷ್ಟು ಮಟ್ಟಿಗೆ ನಿಮ್ಮ ಕಲೆಗೆ ಈ ಹಿಂದೆ ತಿಳಿಸಿರುವ ವೇಷಭೂಷಣ ಹಾಗೂ ವಾದ್ಯಗಳನ್ನು ತಪ್ಪದೆ ಹೊಂದಿಸಿಕೊಂಡು ಬರಬೇಕಾಗಿ ಪ್ರಾರ್ಥನೆ.

ಕರ್ನಾಟಕ ರಾಜಧಾನಿಯಲ್ಲಿ ನಡೆಯುವ ಈ ಬೃಹತ್ ಕಾರ್ಯಕ್ರಮದಲ್ಲಿ ಪಾಲುಗೊಳ್ಳುವುದು ನಿಮಗೆ ಹೆಸರು ತರುವ ಸಂಗತಿ. ಇಂತಹ ಸಂದರ್ಭದಲ್ಲಿ ನೀವು ಎಷ್ಟು ಚೆನ್ನಾಗಿ ಕಲೆಯನ್ನು ಪ್ರದರ್ಶಿಸಿದರೆ ಅಷ್ಟೇ ಕೀರ್ತಿ ನಿಮಗೆ ಸಲ್ಲುತ್ತದೆ. ಅಷ್ಟೇ ಅಲ್ಲ ಇದರಿಂದ ನಿಮ್ಮ ಕಲೆಗೆ ಮುಂದೆ ಹೆಚ್ಚಿನ ಪ್ರೋತ್ಸಾಹ ಹಾಗೂ ಅವಕಾಶಗಳು ದೊರೆಯುತ್ತವೆ.

ಆದ್ದರಿಂದ ಯಾವುದೇ ಸಮಸ್ಯೆಗಳನ್ನು ಮುಂದೊಡ್ಡದೆ ಇದು ನಿಮ್ಮದೇ ಕಾರ್ಯವೆಂದು ಭಾವಿಸಿ ಸಂತೋಷದಿಂದ ಮತ್ತು ಉತ್ಸಾಹದಿಂದ ಇಲ್ಲಿಗೆ ಬಂದು ನಿಮ್ಮ ಕಲೆಯನ್ನು ಪ್ರದರ್ಶಿಸುತ್ತೀರೆಂದು ನಾವು ನಂಬಿದ್ದೇನೆ. ಹೆಚ್ಚು ವಿಷಯ ಇಲ್ಲಿಗೆ ಬಂದಾಗ.

ಇಂತು ಪ್ರಣಾಮಗಳು,

[signature]
ಪ್ರಧಾನ ಸಂಚಾಲಕ

ಅಕಾಡೆಮಿಗಳ ಸಚಿವಾಲಯ

ಎಚ್.ಎಲ್. ನಾಗೇಗೌಡ, ಐ.ಎ.ಎಸ್.(ವಿಶ್ರಾಂತ)
ಅಧ್ಯಕ್ಷ

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ

ನಂ:ಅಸಪ:ಜಾ:ಯ:ಅ: 80-81:395-413

14:3, ಕೆನರಾ ಫೈನಾನ್ಸ್ ಕಾರ್ಪೊರೇಷನ್ ಕಾಂಪ್ಲೆಕ್ಸ್,
ನೃಪತುಂಗ ರಸ್ತೆ, ಬೆಂಗಳೂರು-560 002.
ದಿನಾಂಕ 18.2.1981.

ಪ್ರಿಯರೇ,

ವಿಷಯ:- 1980-81ನೇ ಸಾಲಿನ ರಾಜ್ಯ ಜಾನಪದ ಪ್ರಶಸ್ತಿಗಳು.

ನಾಡಿನ ಜಾನಪದ ಕ್ಷೇತ್ರದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ಕೆಲವು ಮಹನೀಯರುಗಳಿಗೆ 1980-81ನೆ ಸಾಲಿನ ರಾಜ್ಯ ಜಾನಪದ ಪ್ರಶಸ್ತಿ ನೀಡಲು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯು ಪರಿಶೀಲಿಸುತ್ತಿದೆ. ಇದಕ್ಕಾಗಿ ತಮ್ಮ ಪೂರ್ಣ ಪರಿಚಯ ಬೇಕಾಗಿದೆ. ಆದ್ದರಿಂದ ನೀವು ಕೂಡಲೇ ಇದರ ಜೊತೆಯಲ್ಲಿರುವ ಮಾಹಿತಿ ಪತ್ರವನ್ನು ಪೂರ್ಣವಾಗಿ ಭರ್ತಿಮಾಡಿ, ನಿಮ್ಮ ಕಲಾಸೇವೆಯ ಎಲ್ಲಾ ವಿವರಗಳನ್ನು ಬರೆದು, ನಿಮ್ಮ ಇತ್ತೀಚಿನ ಭಾವಚಿತ್ರ (ಅಳತೆ 3" X 2") ಸಮೇತ ಅಕಾಡೆಮಿಯ ಕಾರ್ಯಾಲಯಕ್ಕೆ ಇನ್ನು ಹದಿನೈದು ದಿನಗಳೊಳಗೆ ಕಳುಹಿಸಬೇಕಾಗಿ ಕೋರಿದೆ.

ಇಂತು ತಮ್ಮ ವಿಶ್ವಾಸಿ,
ಎಚ್. ಎಲ್. ನಾಗೇಗೌಡ

ಶ್ರೀ. ಹಾಮಿಗಿ. ಮುದಿಮಲ್ಲಶೆಟ್ಟಿ,
..... ಸೋನ್ನ ..............
ಹಗರಿಬೊಮ್ಮನಹಳ್ಳಿ. ತಾಲೂಕು,
ಬಳ್ಳಾರಿ ಜಿಲ್ಲೆ.



ಕರ್ನಾಟಕ ಸರ್ಕಾರ

ಉಪ ನಿರ್ದೇಶನಾಲಯ, ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆ, ಗುಲಬರ್ಗಾ.

ಗುಲಬರ್ಗಾ ವಿಭಾಗ ಯುವಜನ ಮೇಳ, ೧೯೮೫ - ೮೬

ದಿನಾಂಕ ೧೫ನೇ ಮತ್ತು ೧೬ನೇ ಫೆಬ್ರುವರಿ, ೧೯೮೬

# ಪ್ರಶಸ್ತಿ ಪತ್ರ

ಶ್ರೀ/~~ಶ್ರೀಮತಿ~~/~~ಕುಮಾರಿ~~ ಎಚ್. ಮಾರಿ[illegible] ಇವರು ಗುಲಬರ್ಗಾದಲ್ಲಿ ಜರುಗಿದ ವಿಭಾಗ ಮಟ್ಟದ ಯುವಜನ ಮೇಳದಲ್ಲಿ ಬಳ್ಳಾರಿ ಜಿಲ್ಲೆಯನ್ನು ಪ್ರತಿನಿಧಿಸಿ ದೊಳ್ಳು ಕುಣಿತ ಸ್ಪರ್ಧೆಯಲ್ಲಿ ಭಾಗವಹಿಸಿ ಸ್ಥಾನವನ್ನು ಪಡೆದುದಕ್ಕೆ ಈ ಪ್ರಶಸ್ತಿ ಪತ್ರವನ್ನು ನೀಡಲಾಗಿದೆ.

ದಿನಾಂಕ ೧೬-೨-೧೯೮೬

ಆರ್. ಎಲ್. ಪಾಟೀಲ
ಉಪ ನಿರ್ದೇಶಕರು,
ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆ,
ಗುಲಬರ್ಗಾ ವಿಭಾಗ ಗುಲಬರ್ಗಾ.

## ವಕ್ತೃ ವಿವರ

| ಕ್ರ.ಸಂ. | ಸ್ಥಳ | ಹೆಸರು | ಜಾತಿ | ವೃತ್ತಿ | ವಯಸ್ಸು |
|---|---|---|---|---|---|
| ೧. | ಸೊನ್ನ | ಗುಡ್ಡಪ್ಪ | ಕುರುಬರು | ವ್ಯವಸಾಯ | ೬೫ |
| ೨. | ಸೊನ್ನ | ವಡಚನಾಳು ತಿಂದಪ್ಪ | ಕುರುಬರು | ವ್ಯವಸಾಯ | ೫೦ |
| ೩. | ಸೊನ್ನ | ಹನುಮಂತಪ್ಪ | ಕುರುಬರು | ವ್ಯವಸಾಯ | ೪೯ |
| ೪. | ಸೊನ್ನ | ಶಿವರಾಮಪ್ಪ | ಕುರುಬರು | ವ್ಯವಸಾಯ | ೪೫ |
| ೫. | ಸೊನ್ನ | ದೊಡ್ಡನಿಂಗಪ್ಪ | ಕುರುಬರು | ವ್ಯವಸಾಯ | ೬೦ |
| ೬. | ಸೊನ್ನ | ಹೊನ್ನಮ್ಮ | ಕುರುಬರು | ಕೂಲಿ | ೭೦ |
| ೭. | ಸೊನ್ನ | ಮಾಳಮ್ಮ | ಕುರುಬರು | ಕೂಲಿ | ೭೫ |
| ೮. | ಸೊನ್ನ | ಭಾಗ್ಯಮ್ಮ | ಕುರುಬರು | ಕೂಲಿ | ೨೮ |
| ೯. | ಸೊನ್ನ | ವಿರುಪಾಕ್ಷಿ | ಕುರುಬರು | ವಿದ್ಯಾಭ್ಯಾಸ | ೧೯ |
| ೧೦. | ಸೊನ್ನ | ಕಪ್ಪಿನಿಂಗಪ್ಪ | ಕುರುಬರು | ವ್ಯವಸಾಯ | ೬೨ |
| ೧೧. | ಸೊನ್ನ | ಕೊಟ್ರಮ್ಮ | ಕುರುಬರು | ಕೂಲಿ | ೩೫ |
| ೧೨. | ಸೊನ್ನ | ನಿರ್ಮಲ | ಕುರುಬರು | ಕೂಲಿ | ೩೨ |
| ೧೩. | ಸೊನ್ನ | ಸಿದ್ದಪ್ಪ | ಕುರುಬರು | ವ್ಯವಸಾಯ | ೩೬ |

# ಗ್ರಂಥಋಣ

೧. ಅಂಬಳಿಕೆ ಹಿರಿಯಣ್ಣ, ಜಾನಪದ : ಕೆಲವು ಅಧ್ಯಯನಗಳು, ಲೇ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಟಣೆ

೨. ಅಂಬಳಿಕೆ ಹಿರಿಯಣ್ಣ, ಜಾನಪದ ಲೋಚನ, ಪ್ರಜ್ವಲ ಪ್ರಕಾಶನ, ಮೈಸೂರು

೩. ಅಂಬಳಿಕೆ ಹಿರಿಯಣ್ಣ, ಜಾನಪದ ಪರಿಶೋಧನ, ಪ್ರಜ್ವಲ ಪ್ರಕಾಶನ, ಮೈಸೂರು

೪. ಅರ್ಜುನಗೊಳಸಂಗಿ, (ಉ.ಗ್ರಂ), ಡೊಳ್ಳಿನ ಪದಗಳು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮

೫. ಉಪಾಧ್ಯಾಯ ಕೆ.ಎಸ್. ಜನಪದಕಲೆ - ಬದುಕು, ಕರ್ನಾಟಕ ಸಂಘ, ಪುತ್ತೂರು, ೧೯೯೪

೬. ಕಲಬುರ್ಗಿ ಎಂ.ಎಂ. ಉತ್ತರ ಕರ್ನಾಟಕದ ಜನಪದ ಪದ್ಯ ಸಾಹಿತ್ಯ, ಸಮಾಜ ಪುಸ್ತಕಾಲಯ, ಧಾರವಾಡ

೭. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿ.ವಿ, ಮೈಸೂರು

೮. ಕ್ಯಾತನಹಳ್ಳಿ ರಾಮಣ್ಣ, ಕ್ಷೇತ್ರಕಾರ್ಯದ ಹಾದಿಯಲ್ಲಿ, ಅಚ್ಚಿಹೊತ್ತಿಗೆ ಕ್ಯಾತನಹಳ್ಳಿ, ಮಂಡ್ಯ ಜಿಲ್ಲಾ

೯. ಗೋವಿಂದರಾಜು ಟಿ. ಜಾನಪದೀಯ, ಪುಸ್ತಕಚೇನು, ದೊಡ್ಡಬಳ್ಳಾಪುರ

೧೦. ಚನ್ನಬಸಪ್ಪ ಗೊ.ರು. (ಸಂ), ಕರ್ನಾಟಕ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೧. ಚನ್ನಬಸಪ್ಪ ಗೊ.ರು. ಚಕ್ಕೆರೆ ಶಿವಶಂಕರ್, ಭೈರಮಂಗಲ ರಾಮೇಗೌಡ, ಲೇ, ಜಾನಪದ ದರ್ಶನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೨. ಜಾನಪದ ಕರ್ನಾಟಕ, ಸಂಪುಟ - ೧, ಸಂಚಿಕೆ - ೨, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ಜೀನಹಳ್ಳಿ ಸಿದ್ಧಲಿಂಗಪ್ಪ, (ಸಂ), ಸ್ತ್ರೀವಾದಿ ಜನಪದ ಕಥೆಗಳು, ಪ್ರೇಮ ಪ್ರಕಾಶನ, ದಾವಣಗೇರಿ

೧೪. ನಾಗವರ್ಮ, ಬಳ್ಳಾರಿ ಜಿಲ್ಲೆಯ ತೊಗಲುಗೊಂಬೆಯಾಟ, ಎಂ.ಫಿಲ್ ಪ್ರಬಂಧ, ೨೦೦೨

೧೫. ನಿಂಗಣ್ಣ ಸಣ್ಣಕ್ಕಿ, ಜಾನಪದ ವೈಭವ, ಸಂ, ಪೂರ್ಣಿಮಾ ಪ್ರಕಾಶನ, ಗೋಕಾಕ್ ಬೆಳಗಾವಿ ಜಿಲ್ಲೆ

೧೬. ಪತ್ರಿಕೆಯ ಲೇಖನಗಳು, ಸಾಪ್ತಾಹಿಕ ಪುರವಾಣಿ, ಪ್ರಜಾವಾಣಿ ದಿನಪತ್ರಿಕೆ

೧೭. ಪಾಲ್ತಾಡಿ ರಾಮಕೃಷ್ಣ ಆಚಾರ್, ಜಾನಪದ ಮಿನದನ, ಸುಪ್ರಿಯಾ ಪ್ರಕಾಶನ, ಪುತ್ತೂರು ದಕ್ಷಿಣಕನ್ನಡ

೧೮. ಬಸವರಾಜ ಮಾಲಶೆಟ್ಟಿ, ಉತ್ತರ ಕರ್ನಾಟಕದ ಜಾನಪದ ವಾದ್ಯಗಳು, ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನಕೇಂದ್ರ, ಉಡುಪಿ

೧೯. ಬಸವರಾಜ ನೆಲ್ಲಿಸರ, ನಮ್ಮ ಪ್ರದರ್ಶನ ಜನಪದ ಕಲೆಗಳು, ಶಕ್ತಿ ಪ್ರಕಾಶನ, ಮೈಸೂರು

೨೦. ಬಾಳಣ್ಣ ಸೀಗೀಹಳ್ಳಿ, ಡೆಪ್ಯೂಟಿ ಚೆನ್ನಬಸವಪ್ಪನವರ ಜೀವನ ಮತ್ತು ಸಾಧನೆ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ

೨೧. ಬೋರಲಿಂಗಯ್ಯ ಹಿ.ಚಿ. ಸಂ, ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೨೨. ಮುದೇನೂರು ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೩. ಮೃತ್ಯುಂಜಯ ಬ. ಹೊರಕೇರಿ, ನಲವಡಿ ಶ್ರೀಕಂಠಶಾಸ್ತ್ರೀಗಳ ಜೀವನ ಮತ್ತು ಕೃತಿಗಳು, ನಲವಡಿ ಶ್ರೀಕಂಠಶಾಸ್ತ್ರಿ ಸ್ಮಾರಕ ಪ್ರತಿಷ್ಠಾನ, ನಲವಡಿ ಧಾರವಾಡ, ೧೯೯೨

೨೪. ರಂಗಾರೆಡ್ಡಿ ಕೋಡಿರಾಂಪುರ (ಸಂ), ಜಾನಪದ ೧೯೯೩ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨೫. ರಾಮಚಂದ್ರೇಗೌಡ ಹಿ.ಶಿ. ೧೯೯೩, ಜನಪದರು ನಾವು, ಮಾನವಿ ಪ್ರಕಾಶನ, ಮಾನಸಗಂಗೋತ್ರಿ, ಮೈಸೂರು

೨೬. ಲಕ್ಕಪ್ಪಗೌಡ ಎಚ್.ಜೆ. (ಪ್ರ.ಸಂ), ರಾಮಚಂದ್ರೇಗೌಡ ಹಿ.ಶಿ. ಮತ್ತು ಕೃಷ್ಣಮೂರ್ತಿ ಹನೂರು(ಸಂ), ೧೯೯೮, ಸುವರ್ಣ ಜಾನಪದ, ಸಂಪುಟ - ೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨೭. ಲಕ್ಕಪ್ಪಗೌಡ ಎಚ್ .ಜೆ. (ಪ್ರ.ಸಂ), ಜಾನಪದ ಕೈಪಿಡಿ, ಸಂಪುಟ - ೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨೮. ಲಕ್ಕಪ್ಪಗೌಡ ಎಚ್.ಜೆ. (ಪ್ರ.ಸಂ), ಪುರುಷೋತ್ತಮ ಬಿಳಿಮಲೆ, ಲೇ, ತೀ.ನಂ.ಶಂಕರನಾರಾಯಣ, ಅಂಬಳಿಕೆ ಹಿರಿಯಣ್ಣ, ಎ.ವಿ.ನಾವಡ, ಶ್ರೀರಾಮ ಇಟ್ಟಣ್ಣವರ, (ಜಾನಪದ ಮಾಲೆ - ೧), ಜಾನಪದ ಕೈಪಿಡಿ

೨೯. ಲಿಯೋಟಾಲ್ ಸ್ಟಾಯ್, ಸಿ.ಪಿ.ಕೆ. ಕಲೆ ಎಂದರೇನು? ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೩೦. ಲೀಲಾರಾಮಣ್ಣ, ಜನಪದ ಹೊಂಬಾಳೆ, ಎಲ್.ಆರ್. ಪಬ್ಲಿಕೇಷನ್ , ಮೈಸೂರು

೩೧. ವಾಮನ ನಂದಾವರ, ಜನಪದ ಸುತ್ತಮುತ್ತ, ಪ್ರಜಾಬಂಧು ಪ್ರಕಾಶನ, ಮಂಗಳೂರು

೩೨. ವಿರೂಪಾಕ್ಷಪ್ಪ ಕೆ. ಮೇಟಿ ಕೊಟ್ರಪ್ಪ, ಸಂ, ನಡಿಯಪ್ಪ ನಮ್ಮ ನಾಡಿಗೆ, (ಬಳ್ಳಾರಿ ಜಿಲ್ಲೆ ಡೊಳ್ಳಿನ ಪದಗಳು), ಪ್ರಕಾಶಕರು, ಯುವಕರ ಸಂಘ, ರಾಮನಗರ - ಹಗರಿಬೊಮ್ಮನಹಳ್ಳಿ

೩೩. ವೀರಣ್ಣದಂಡೆ, ರ್ಗ೯೩, ಕನ್ನಡ ಜಾನಪದ ಪ್ರಜ್ಞೆ, ಕವಿಮಾಗ ಪ್ರಕಾಶನ, ತೇಜಸ್ವಿನಿ, ಸರಸ್ವತಿಪುರ, ವಿಶ್ವವಿದ್ಯಾಲಯ ಅಂಚೆ, ಕಲಬುರ್ಗಿ - ೬

೩೪. ವೀರಣ್ಣದಂಡೆ, ಸಂ, ಜಾನಪದ, ೧೯೯೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೩೫. ಶಂಕರನಾರಾಯಣ ತೀ.ನಂ. ೧೯೯೯, ಜಾನಪದ ಸಮೀಕ್ಷೆ - ವಿಶ್ಲೇಷಣೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು

೩೬. ಶಿವಾನಂದ ಗುಬ್ಬಣ್ಣವರ, ಸಂ, ದೇವsರ್ ಬಂದಾವ್ ಬನ್ನಿsರೇ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೫

೩೭. ಸಿಂಪಿ ಲಿಂಗಣ್ಣ, ಉತ್ತರ ಕರ್ನಾಟಕದ ಜನಪದ ಕಥೆಗಳು, ಸಾಹಿತ್ಯ ಅಕಾಡೆಮಿ

೩೮. ಸುಂಕಾಪುರ ಎಮ್.ಎಸ್. ಸಂ, ಜೀವನ ಜೋಕಾಲಿ ಭಾಗ - ೬, ಡೊಳ್ಳಿನ ಹಾಡು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೩೯. ಹರಿಶ್ಚಂದ್ರ ದಿಗ್ಸಂಗಿಕರ್, ದಲಿತ ತತ್ವಪದಕಾರ ಜಂಬಗಿ ಶರಣ, ಅಭಯ ಪ್ರಕಾಶ, ಗುಲಬರ್ಗಾ

೪೦. ಹಸನಬಿ ಬೀಳಗಿ, ಜಾನಪದ ಸೃಷ್ಟಿ - ದೃಷ್ಟಿ, ಸಾಯಿ ಪ್ರಕಾಶನ, ಧಾರವಾಡ

೪೧. ಹೆಬ್ಬಾಲೆ ಕೆ.ನಾಗೇಶ್, ಜಾನಪದ ಬನಸಿರಿ, ರುಚಿರ ಪ್ರಕಾಶನ, ಎಂ.ಪಿ.ಪ್ರಕಾಶ್ ನಗರ, ಹೊಸಪೇಟೆ

## ಛಾಯಾಚಿತ್ರಗಳ ವಿವರಣೆ

೧. ಡೊಳ್ಳಿನೊಂದಿಗೆ ಮುದಿಮಲ್ಲಪ್ಪನವರು

೨. ಮುದಿಮಲ್ಲಪ್ಪನವರು ಬಾಳಿದ ಮನೆ

೩. ಮುದಿಮಲ್ಲಪ್ಪನವರು ಬಡಿಯುತ್ತಿದ್ದ ಡೊಳ್ಳು ಹಾಗೂ ಗೆಜ್ಜೆ, ಕಂಬಳಿ, ಶಾಲು, ತಾಳಗಳು

೪. ಡೊಳ್ಳುಕುಣಿತದಲ್ಲಿ ಮುದಿಮಲ್ಲಪ್ಪ

೫. ಡೊಳ್ಳಿನ ತರಬೇತಿ ನೀಡುತ್ತಿರುವ ಮುದಿಮಲ್ಲಪ್ಪ

೬. ಮುದಿಮಲ್ಲಪ್ಪನವರ ಆರಾಧ್ಯದೇವತೆ ಸೊನ್ನದ 'ಸೊಲ್ಲಮ್ಮದೇವಿ'

೭. ಸೊಲ್ಲಮ್ಮನ ಗುಡಿಯ ದ್ವಾರಬಾಗಿಲು

೮. ಎಚ್.ಎಲ್.ನಾಗೇಗೌಡರೊಂದಿಗೆ ಮುದಿಮಲ್ಲಪ್ಪ

೯. ಹಲವು ಪ್ರಶಸ್ತಿಗಳು

೧೦. ಪ್ರಶಸ್ತಿಗಳೊಂದಿಗೆ ಶ್ರೀಯುತರ ಮಡದಿ ಶ್ರೀಮತಿ ಹೊನ್ನಮ್ಮ

೧೧. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ರಾಜ್ಯಪ್ರಶಸ್ತಿ ೧೯೮೦, ರಾಜ್ಯೋತ್ಸವ ಪ್ರಶಸ್ತಿ ೧೯೯೦, ಜಾನಪದ ಶ್ರೀ ಪ್ರಶಸ್ತಿ ೨೦೦೧

೧೨. ಮುದಿಮಲ್ಲಪ್ಪನವರು ಧರ್ಮಪತ್ನಿಯೊಂದಿಗೆ ಕುಟುಂಬದ ಸದಸ್ಯರು

೧೩. ಮೆಚ್ಚುಗೆಯ ಪ್ರಶಸ್ತಿ ಪತ್ರಗಳು

೧೪. ಬಿದ್ದುಹೋದ ಮುದಿಮಲ್ಲಪ್ಪನವರ ಮನೆಯ ಮೇಲಿನ ಛಾವಣಿ



೧. ಡೊಳ್ಳಿನೊಂದಿಗೆ ಮುದಿಮಲ್ಲಪ್ಪನವರು



೨. ಮುದಿಮಲ್ಲಪ್ಪನವರು ಬಾಳಿದ ಮನೆ



೩. ಮುದಿಮಲ್ಲಪ್ಪನವರು ಬಡಿಯುತ್ತಿದ್ದ ಡೊಳ್ಳು ಹಾಗೂ ಗೆಜ್ಜೆ, ಕಂಬಳಿ, ಶಾಲು, ತಾಳಗಳು



೪. ಡೊಳ್ಳುಕುಣಿತದಲ್ಲಿ ಮುದಿಮಲ್ಲಪ್ಪ



೫. ಡೊಳ್ಳಿನ ತರಬೇತಿ ನೀಡುತ್ತಿರುವ ಮುದಿಮಲ್ಲಪ್ಪ



೬. ಮುದಿಮಲ್ಲಪ್ಪನವರ ಆರಾಧ್ಯದೇವತೆ ಸೊನ್ನದ 'ಸೊಲ್ಲಮ್ಮ ದೇವಿ'



೭. ಸೊಲ್ಲಮ್ಮನ ಗುಡಿಯ ದ್ವಾರಬಾಗಿಲು



೮. ಎಚ್.ಎಲ್.ನಾಗೇಗೌಡರೊಂದಿಗೆ ಮುದಿಮಲ್ಲಪ್ಪ



೯. ಹಲವು ಪ್ರಶಸ್ತಿಗಳು



೧೦. ಪ್ರಶಸ್ತಿಗಳೊಂದಿಗೆ ಶ್ರೀಯುತರ ಮಡದಿ ಶ್ರೀಮತಿ ಹೊನ್ನಮ್ಮ



೧೧. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ರಾಜ್ಯಪ್ರಶಸ್ತಿ ೧೯೮೦, ರಾಜೋತ್ಸವ ಪ್ರಶಸ್ತಿ ೧೯೯೦, ಜಾನಪದ ಶ್ರೀ ಪ್ರಶಸ್ತಿ ೨೦೦೧



೧೨. ಮುದಿಮಲ್ಲಪ್ಪನವರು ಧರ್ಮಪತ್ನಿಯೊಂದಿಗೆ ಕುಟುಂಬದ ಸದಸ್ಯರು

